# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೪, ೨೦೧೪ (ಭಾದ್ರಪದ ೧೩, ಶಕ ವರ್ಷ ೧೯೩೬)<br>Bangalore, Thursday, September 4, 2014 (Bhadrapada 13, Shaka Varsha 1936) | ಸಂಚಿಕೆ ೩೬<br>Issue 36 |
|---|---|---|

## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ. 1, ಅಲಿ ಆಸ್ಕರ್ ರಸ್ತೆ, ಬೆಂಗಳೂರು–52.**

**ಅಧಿಸೂಚನೆ**

**ಸಂಖ್ಯೆ : ಸಿಬ್ಬಂದಿ/02/ಇಜಿಸಿ/2014–15, ದಿನಾಂಕ : 25–04–2014**

**ವಿಷಯ :** ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ, 2013 ರಡಿಯಲ್ಲಿ ಸಹಕಾರ ಇಲಾಖೆಯ ವಿವಿಧ ವೃಂದಗಳಲ್ಲಿ ಹೈದರಾಬಾದ್–ಕರ್ನಾಟಕ ಪ್ರದೇಶದವರಿಗಾಗಿ ಕೇಂದ್ರ ಕಛೇರಿಯಲ್ಲಿ ಶೇ. 8ರಷ್ಟು ಮತ್ತು ಹೈದರಾಬಾದ್–ಕರ್ನಾಟಕ ಪ್ರದೇಶದಲ್ಲಿ ವೃಂದವಾರು ಮೀಸಲಾತಿಯನ್ವಯ ಹುದ್ದೆಗಳನ್ನು ಗುರುತಿಸಿರುವ ಕುರಿತು.

**ಪ್ರಸ್ತಾವನೆ :**

ಭಾರತೀಯ ಸಂವಿಧಾನದ ಅನುಚ್ಛೇಧ 371(ಜೆ)ಯ ಅನುಷ್ಠಾನಕ್ಕೆ ಸಂಬಂಧಿಸಿದಂತೆ, ಹೊರಡಿಸಿರುವ ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ 2013ರ ಕಂಡಿಕೆ 13ರ ಅನ್ವಯ ಸಹಕಾರ ಇಲಾಖೆಯ ಸಹಕಾರ ಸಂಘಗಳ ನಿಬಂಧಕರ ಕಛೇರಿಯನ್ನು ರಾಜ್ಯ ಮಟ್ಟದ ಕಛೇರಿಯೆಂದು ಗುರುತಿಸಲಾಗಿದ್ದು, ಸದರಿ ಕಛೇರಿಯ ಸೇವೆಯಲ್ಲಿನ ಹುದ್ದೆಗಳಲ್ಲಿ ವೃಂದಗಳವಾರು ಹೈದರಾಬಾದ್–ಕರ್ನಾಟಕ ಪ್ರದೇಶದ ವ್ಯಾಪ್ತಿಯ ಸ್ಥಳೀಯ ವ್ಯಕ್ತಿಗಳಿಗೆ ಲಭ್ಯವಿರುವ ಶೇ. 8ರಷ್ಟು ಹುದ್ದೆಗಳನ್ನು ಕೆಳಕಂಡ ಭಾಗ–I ರಂತೆ ಮೀಸಲಿರಿಸಿ ಗುರುತಿಸಲಾಗಿದೆ ಹಾಗೂ ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ಮಂಜೂರಾದ ಹುದ್ದೆಗಳಿಗೆ ಅನುಚ್ಛೇದ 371 (ಜೆ)ಯ ಪ್ರಕಾರ ಗ್ರೂಪ್ 'ಎ' ಮತ್ತು 'ಬಿ' ಹುದ್ದೆಗಳಿಗೆ 75% ರಷ್ಟು ಗ್ರೂಪ್ 'ಸಿ' ಹುದ್ದೆಗಳಿಗೆ 80% ರಷ್ಟು ಮತ್ತು ಗ್ರೂಪ್ 'ಡಿ' ಹುದ್ದೆಗಳಿಗೆ 85% ರಷ್ಟು ಮೀಸಲಿಟ್ಟ ಹುದ್ದೆಗಳನ್ನು ಭಾಗ– II ರಲ್ಲಿ ಗುರುತಿಸಲಾಗಿದೆ.

ಭಾಗ– I

| ಕ್ರ ಸಂ. | ಹುದ್ದೆ | ವೇತನ ಶ್ರೇಣಿ (ರೂ.ಗಳಲ್ಲಿ) | ಮಂಜೂರಾದ ವೃಂದಬಲ (ವೃ ಮತ್ತು ನೇ.ನಿ.ಯ ನಂತರದ ಪರಿಷ್ಕರಣೆ ಸಹಿತ) | ಮುಂಬಡ್ತಿ | ನೇರ ನೇಮಕಾತಿ | ಸ್ಥಳೀಯ ವೃಂದದಲ್ಲಿ ಹೈ–ಕ ಪ್ರದೇಶದವರಿಗಾಗಿ ಗುರುತಿಸಲಾದ ಶೇ. 8 ರಷ್ಟು ಹುದ್ದೆಗಳು | | |
|---|---|---|---|---|---|---|---|---|
| | | | | | | ಮುಂಬಡ್ತಿ | ನೇರ ನೇಮಕಾತಿ | ಒಟ್ಟು |
| 1 | 2 | 3 | 4 | 5 | | 6 | 7 | 8 |
| 1. | ಸಹಕಾರ ಸಂಘಗಳ ನಿಬಂಧಕರು | | 01 | – | – | – | – | – |
| 2. | ಸಹಕಾರ ಸಂಘಗಳ ಅಪರ ನಿಬಂಧಕರು | 48900–63600 | 04 | 100% 4 | – | – | – | – |
| 3. | ಸಹಕಾರ ಸಂಘಗಳ ಜಂಟಿ ನಿಬಂಧಕರು | 40050–56550 | 04 | 100% 4 | – | – | – | – |

| 1 | 2 | 3 | 4 | 5 | | 6 | 7 | 8 |
|---|---|---|---|---|---|---|---|---|
| 4. | ಸಹಕಾರ ಸಂಘಗಳ ಉಪ ನಿಬಂಧಕರು | 36300–53850 | 02 | 100% 2 | – | – | – | – |
| 5. | ಸಹಕಾರ ಸಂಘಗಳ ಸಹಾಯಕ ನಿಬಂಧಕರು | 22800–43200 | 20 | 50% 10 | 50% 10 | 1 | 1 | 2 |
| 6. | ಸಹಕಾರ ಅಭಿವೃದ್ಧಿ ಅಧಿಕಾರಿ | 21600–40050 | 10 | 100% 10 | – | 1 | – | 1 |
| 7. | ಅಧೀಕ್ಷಕರು | 20000–36300 | 11 | 100% 11 | – | 1 | – | 1 |
| 8. | ಸಹಕಾರ ಸಂಘಗಳ ಹಿರಿಯ ನಿರೀಕ್ಷಕರು | 17650–32000 | 12 | 100% 12 | – | 1 | – | 1 |
| 9. | ಸಹಕಾರ ಸಂಘಗಳ ನಿರೀಕ್ಷಕರು | 14550–26700 | 18 | – | 100% 18 | – | 1 | 1 |
| 10. | ಪ್ರಥಮ ದರ್ಜೆ ಸಹಾಯಕರು | 14550–26700 | 32 | 50% 16 | 50% 16 | 1 | 2 | 3 |
| 11. | ಶೀಘ್ರಲಿಪಿಗಾರರು | 14550–26700 | 12 | 33 1/3% 04 | 66 2/3% 08 | – | 1 | 1 |
| 12. | ಹಿರಿಯ ಬೆರಳಚ್ಚುಗಾರರು | 14550–26700 | 6 | 100% 06 | – | 1 | – | 1 |
| 13. | ಹಿರಿಯ ವಾಹನಚಾಲಕರು | 14550–26700 | 6 | 100% 06 | – | 1 | – | 1 |
| 14. | ದ್ವಿತೀಯ ದರ್ಜೆ ಸಹಾಯಕರು | 11600–21000 | 29 | 25% 07 | 75% 22 | – | 2 | 2 |
| 15. | ಬೆರಳಚ್ಚುಗಾರರು | 11600–21000 | 11 | – | 100% 11 | 1 | – | 1 |
| 16. | ವಾಹನಚಾಲಕರು | 11600–21000 | 11 | – | 100% 11 | 1 | – | 1 |
| 17. | ಜಾರಿಗಾರರು | 11000–19000 | 8 | 50% 04 | 50% 04 | – | 1 | 1 |
| 18. | ಡಿ ಗ್ರೂಪ್ ನೌಕರರು | 9600–14550 | 32 | – | 100% 32 | – | 3 | 3 |

**ಭಾಗ–II**

| ಕ್ರ. ಸಂ. | ಹುದ್ದೆ | ವೇತನ ಶ್ರೇಣಿ (ರೂ.ಗಳಲ್ಲಿ) | ಮಂಜೂರಾದ ವೃಂದಬಲ (ವೃ ಮತ್ತು ನೇ.ನಿ.ಯ ನಂತರದ ಪರಿಷ್ಕರಣೆ ಸಹಿತ) | ಮುಂಬಡ್ತಿ | ನೇರ ನೇಮಕಾತಿ | ಸ್ಥಳೀಯ ವೃಂದದಲ್ಲಿ ಹೈ–ಕ ಪ್ರದೇಶದವರಿಗಾಗಿ ಗುರುತಿಸಲಾದ 'ಎ'& 'ಬಿ' ಗೆ ಶೇ. 75, 'ಸಿ'ಗೆ ಶೇ. 80 ಹಾಗೂ 'ಡಿ' ಗೆ ಶೇ. 85 ರಷ್ಟು ಹುದ್ದೆಗಳು | | |
|---|---|---|---|---|---|---|---|---|
| | | | | | | ಮುಂಬಡ್ತಿ | ನೇರ ನೇಮಕಾತಿ | ಒಟ್ಟು |
| 1 | 2 | 3 | 4 | 5 | | 6 | 7 | 8 |
| 1. | ಸಹಕಾರ ಸಂಘಗಳ ಉಪ ನಿಬಂಧಕರು (75%) | 36300–53850 | 07 | 100% 07 | – | 5 | – | 5 |
| 2. | ಸಹಕಾರ ಸಂಘಗಳ ಸಹಾಯಕ ನಿಬಂಧಕರು (75%) | 22800–43200 | 26 | 50% 13 | 50% 13 | 10 | 10 | 20 |
| 3. | ಸಹಕಾರ ಅಭಿವೃದ್ಧಿ ಅಧಿಕಾರಿ (75%) | 21600–40050 | 33 | 100% 33 | – | 25 | – | 25 |

| 1 | 2 | 3 | 4 | 5 | | 6 | 7 | 8 |
|---|---|---|---|---|---|---|---|---|
| 4. | ಅಧೀಕ್ಷಕರು (80%) | 20000–36300 | 13 | 100% 13 | – | 10 | – | 10 |
| 5. | ಸಹಕಾರ ಸಂಘಗಳ ಹಿರಿಯ ನಿರೀಕ್ಷಕರು (80%) | 17650–32000 | 60 | 100% 60 | – | 48 | – | 48 |
| 6. | ಸಹಕಾರ ಸಂಘಗಳ ನಿರೀಕ್ಷಕರು (80%) | 14550–26700 | 84 | – | 100% 84 | – | 67 | 67 |
| 7. | ಪ್ರಥಮ ದರ್ಜೆ ಸಹಾಯಕರು (80%) | 14550–26700 | 25 | 50% 12 | 50% 13 | 10 | 10 | 20 |
| 8. | ಶೀಘ್ರಲಿಪಿಗಾರರು (80%) | 14550–26700 | 07 | 33 1/3% 02 | 66 2/3% 05 | 2 | 4 | 6 |
| 9. | ದ್ವಿತೀಯ ದರ್ಜೆ ಸಹಾಯಕರು (80%) | 11600–21000 | 69 | 25% 17 | 75% 52 | 14 | 42 | 56 |
| 10. | ಬೆರಳಚ್ಚುಗಾರರು (80%) | 11600–21000 | 20 | – | 100% 20 | – | 16 | 16 |
| 11. | ವಾಹನಚಾಲಕರು (80%) | 11600–21000 | 13 | – | 100% 13 | – | 10 | 10 |
| 12. | ಜಾರಿಗಾರರು (85%) | 11000–19000 | 6 | 50% | 50% | | | |
| | ರಾಯಚೂರು ಜಿಲ್ಲೆ–2 | | 2 | 01 | 01 | 1 | – | 1 |
| | ಬಳ್ಳಾರಿ ಜಿಲ್ಲೆ–1 | | 1 | – | 01 | – | 1 | 1 |
| | ಬೀದರ್ ಜಿಲ್ಲೆ–1 | | 1 | 01 | – | 1 | – | 1 |
| | ಗುಲ್ಬರ್ಗಾ ಜಿಲ್ಲೆ–1 | | 1 | – | 01 | – | 1 | 1 |
| | ಕೊಪ್ಪಳ ಜಿಲ್ಲೆ–1 | | 1 | 01 | – | 1 | – | 1 |
| 13. | ಡಿ ಗ್ರೂಪ್ ನೌಕರರು (85%) | 9600–14550 | 81 | – | 100% | | | |
| | ರಾಯಚೂರು ಜಿಲ್ಲೆ–20 | | 20 | – | 20 | – | 17 | 17 |
| | ಬಳ್ಳಾರಿ ಜಿಲ್ಲೆ–9 | | 09 | – | 09 | – | 08 | 08 |
| | ಬೀದರ್ ಜಿಲ್ಲೆ–12 | | 12 | – | 12 | – | 10 | 10 |
| | ಯಾದಗಿರಿ ಜಿಲ್ಲೆ–10 | | 10 | – | 10 | – | 09 | 09 |
| | ಗುಲ್ಬರ್ಗಾ ಜಿಲ್ಲೆ–17 | | 17 | – | 17 | – | 14 | 14 |
| | ಕೊಪ್ಪಳ ಜಿಲ್ಲೆ–13 | | 13 | – | 13 | – | 11 | 11 |

ಮೇಲ್ಕಂಡಂತೆ ಪ್ರತಿಯೊಂದು ವೃಂದದ ಹುದ್ದೆಗಳ ಸಂಖ್ಯೆಯು, ಸರ್ಕಾರದ ಅನುಮೋದನೆಗಾಗಿ ಸಲ್ಲಿಸಲಾಗಿರುವ ಇಲಾಖೆಯ ಪರಿಷ್ಕೃತ ವೃಂದ ಮತ್ತು ನೇಮಕಾತಿ ನಿಯಮಗಳ ಅನುಮೋದನೆಗೆ ಒಳಪಟ್ಟಿರುತ್ತದೆ.

**P.R. 473**
**SC-100**

**ಡಾ॥ ಎನ್.ಎಸ್. ಚನ್ನಪ್ಪಗೌಡ**
ಸಹಕಾರ ಸಂಘಗಳ ನಿಬಂಧಕರು,
ಕರ್ನಾಟಕ ರಾಜ್ಯ, ಬೆಂಗಳೂರು

## ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ಜಿಲ್ಲಾಡಳಿತ ಭವನ, 2ನೇ ಮಹಡಿ, ಕೊಠಡಿ ಸಂ. 52, 53, ಕರೂರು ಕೈಗಾರಿಕಾ ಪ್ರದೇಶ, ಪಿ.ಬಿ. ರಸ್ತೆ, ದಾವಣಗೆರೆ, ಇವರ ಕಾರ್ಯಾಲಯ.

**ವಿಷಯ :** ಪುನಃಶ್ಚೇತನಗೊಂಡಿರುವ ಸಿಟಿ ಪತ್ತಿನ ಸಹಕಾರ ಸಂಘ ನಿ, ಹರಿಹರ ಇದನ್ನು ಸಮಾಪನೆಗೊಳಿಸುವ ಬಗ್ಗೆ

**ಉಲ್ಲೇಖ :**

1. ಸಹಕಾರ ಸಂಘಗಳ ನಿಬಂಧಕರು, ದಾವಣಗೆರೆ ಜಿಲ್ಲೆ ಇವರ ಪತ್ರ ಸಂಖ್ಯೆ: ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್10/ 2008–09, ದಿನಾಂಕ : 30–09–2013.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪ–ವಿಭಾಗ. ದಾವಣಗೆರೆ ಇವರ ಪತ್ರ ಸಂಖ್ಯೆ: ಸನಿ31/ ಸಮಾಪನೆ/ಸಿಆರ್–/2014–15, ದಿನಾಂಕ : 19–06–2014.

**ಪ್ರಸ್ತಾವನೆ :**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ನೋಂದಣಿ ಸಂಖ್ಯೆ : ಎಆರ್–31/ಆರ್‌ಜಿಎನ್/23218/96–97, ದಿನಾಂಕ : 26–03–1997 ರಲ್ಲಿ ನೋಂದಣಿಯಾಗಿರುತ್ತದೆ. ಸದರಿ ಸಂಘದ ಸದಸ್ಯರ ಕೋರಿಕೆ ಮೇರೆಗೆ ಉಲ್ಲೇಖ (1)ರನ್ವಯ ಸಂಘವನ್ನು ಪುನಃಶ್ಚೇತನಗೊಳಿಸಲಾಗಿತ್ತು. ಆದರೆ ಸಂಘದ ಸದಸ್ಯರು ಆಸಕ್ತಿ ವಹಿಸಿ ಷೇರು ಕ್ರೋಢೀಕರಿಸಿ ಸಂಘದ ಪುನಃಶ್ಚೇತನಕ್ಕೆ ಕ್ರಮವಿಟ್ಟಿರುವುದಿಲ್ಲ. 2004–05ನೇ ಸಾಲಿನಿಂದ ಲೆಕ್ಕಪರಿಶೋಧನೆಯಾಗಿರುವುದಿಲ್ಲ. ಸದಸ್ಯರು ಆಸಕ್ತಿ ತೋರದೆ ಇರುವುದರಿಂದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಹಾಗೂ ಪುನಃಶ್ಚೇತನದ ಆದೇಶದ ಷರತ್ತುಗಳನ್ನು ಪಾಲಿಸದೇ ಇರುವುದರಿಂದ ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಉಲ್ಲೇಖ (2) ರಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ದಾವಣಗೆರೆ ಇವರ ಕೋರಿಕೆಯಂತೆ ಸದರಿ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಭಾವಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ನಂ. ಡಿಆರ್/ಡಿವಿಜಿ/ಸಮಾಪನೆ/ಸಿಆರ್–10/2008–09, ದಿನಾಂಕ : 24–06–2014.**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಒ/139/ಸಿಎಲ್ಎಂ/2010, ದಿನಾಂಕ : 17–02–2011ರ ಪ್ರಕಾರ ದತ್ತವಾದ ಅಧಿಕಾರದನ್ವಯ ಜಿ. ಓಬನಾಯ್ಕ ಸಹಕಾರ ಸಂಘಗಳ ಉಪ ನಿಬಂಧಕರು ದಾವಣಗೆರೆ ಜಿಲ್ಲೆ, ದಾವಣಗೆರೆ ಆದ ನಾನು ಸ್ಥಗಿತಗೊಂಡಿರುವ ಸಿಟಿ ಪತ್ತಿನ ಸಹಕಾರ ಸಂಘ ನಿ, ಹರಿಹರ ಇದನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1)ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ ಹರಿಹರ ಇವರನ್ನು ಸಂಘದ ಸಮಾಪಕರನ್ನಾಗಿ ನೇಮಿಸಿರುತ್ತೇನೆ. ಸಮಾಪಕರು ಪ್ರಭಾರವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73ರ ಪ್ರಕಾರ ಪಡೆದುಕೊಳ್ಳತಕ್ಕದ್ದು, ಹಾಗೂ ಸಂಘದ ಆಸ್ತಿ–ಜವಾಬ್ದಾರಿಗಳ ವಿಲೇವಾರಿಗಾಗಿ ಆದ್ಯತಾ ಪಟ್ಟಿ ತಯಾರಿಸಿ, ಈ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಯ್ದೆ ಕಲಂ 74ರನ್ವಯ ಸಮಾಪನಾ ಕಾರ್ಯ ನಿರ್ವಹಿಸಲು ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಈ ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ : 24–06–2014 ರಂದು ಹೊರಡಿಸಿರುತ್ತೇನೆ.

**P.R. 474**
**SC-10**

**ಸಹಕಾರ ಸಂಘಗಳ ಉಪ ನಿಬಂಧಕರು,**
ದಾವಣಗೆರೆ ಜಿಲ್ಲೆ, ದಾವಣಗೆರೆ.

## ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಶಿವಮೊಗ್ಗ ಜಿಲ್ಲೆ, ಸಹಕಾರ ಭವನ ಆರ್‌ಟಿಓ ಕಛೇರಿ ರಸ್ತೆ, ಶಿವಮೊಗ್ಗ,

**ವಿಷಯ :** ಸಮಾಪನೆಯಲ್ಲಿರುವ "ಕೃಷಿ ಪತ್ತಿನ ಸಹಕಾರ ಸಂಘ ನಿ., ಆನಂದಪುರ, ಸಾಗರ ತಾ" ಈ ಸಹಕಾರ ಸಂಘವನ್ನು ಪುನಃಶ್ಚೇತನಗೊಳಿಸುವ ಬಗ್ಗೆ

**ಉಲ್ಲೇಖ :**
1. ಈ ಕಛೇರಿಯ ಆದೇಶ ಸಂ. ಡಿಆರ್‌ಎಸ್/ಕಾನೂನು–3/ಡಿಎಲ್‌ಎಸ್/ಸಿಆರ್–23/1999–00, ದಿನಾಂಕ : 31–07–1999.
2. ಸಮಾಪನಾಧಿಕಾರಿಯವರ ಸಭೆಯ ನಡವಳಿ ದಿನಾಂಕ : 12–06–2014.
3. ಸಹಕಾರ ಸಂಘಗಳ ಸಹಾಯಕ ನಿಬಂಧಕರು ಸಾಗರ ರವರ ಪತ್ರ ಸಂ. ಎಆರ್–25/ಎಲ್‌ಕ್ಯೂಡಿ/ಸಿಆರ್–9/2014–15, ದಿನಾಂಕ : 13–06–2014.

**ಪ್ರಸ್ತಾವನೆ :**

ಸಮಾಪನೆಯಲ್ಲಿರುವ "**ಕೃಷಿ ಪತ್ತಿನ ಸಹಕಾರ ಸಂಘ ನಿ., ಆನಂದಪುರ, ಸಾಗರ ತಾ**" ಈ ಸಹಕಾರ ಸಂಘವನ್ನು ಈ ಕಛೇರಿಯ ಉಲ್ಲೇಖ(1)ರ ಆದೇಶದಲ್ಲಿ ಸಮಾಪನೆಗೊಳಿಸಿ, ಸಮಾಪನಾಧಿಕಾರಿಯಾಗಿ ಮೇಲ್ವಿಚಾರಕರು, ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ಲಿ., ಶಿವಮೊಗ್ಗ ಸಾಗರ ಶಾಖೆ ಇವರನ್ನು ನೇಮಕ ಮಾಡಿ ಆದೇಶಿಸಲಾಗಿತ್ತು.

ಸಮಾಪನಾಧಿಕಾರಿಗಳು ಸಂಘದ ಪ್ರಭಾರವನ್ನು ದಿನಾಂಕ : 09–08–1999 ರಂದು ಪಡೆದಿರುತ್ತಾರೆ. ದಿನಾಂಕ : 10–06–2014 ರಂದು ಸಂಘದ ಸದಸ್ಯರು ಸಂಘವು ಸಮಾಪನೆಗೊಂಡಿರುವುದರಿಂದ ಸದಸ್ಯರಿಗೆ ತುಂಬಾ ತೊಂದರೆಯಾಗಿದೆ. ಈ ಭಾಗದ ರೈತರಿಗೆ, ಕೂಲಿ ಕಾರ್ಮಿಕರಿಗೆ ಸಹಕಾರ ತತ್ವದಡಿಯಲ್ಲಿ ನೋಂದಣಿಯಾದ ಸಹಕಾರ ಸಂಸ್ಥೆಯಿಂದ ದೊರೆಯಬಹುದಾದ ಸೌಲಭ್ಯಗಳು ದೊರೆಯದೇ ವಂಚಿತರಾಗಿರುತ್ತಾರೆ. ಈ ಸಹಕಾರ ಸಂಘವನ್ನು ಪುನಃಶ್ಚೇತನಗೊಳಿಸಿದ್ದಲ್ಲಿ ಸದಸ್ಯರಿಗೆ ಕೃಷಿ ಸಾಲ, ಗೊಬ್ಬರ, ಇನ್ನಿತರೆ ಸೌಲಭ್ಯಗಳನ್ನು ನೀಡಿ ಉತ್ತಮವಾಗಿ ನಡೆಸಿಕೊಂಡು ಹೋಗುತ್ತೇವೆ. ಇದರಿಂದ, ಸದಸ್ಯರಿಗೆ ಅನುಕೂಲವಾಗಲಿದೆ ಎಂದು ತಿಳಿಸಿ ಮನವಿ ಸಲ್ಲಿಸಿ ಪುನಃಶ್ಚೇತನಗೊಳಿಸಲು ಕೊಡಲು ಕೋರಿರುತ್ತಾರೆ.

ಸಮಾಪನಾಧಿಕಾರಿಯವರು ದಿನಾಂಕ : 12–06–2014ರ ಸಮಾಪನಾಧಿಕಾರಿ ಸಭೆಯಲ್ಲಿ ಸದಸ್ಯರ ಮನವಿಯನ್ನು ಪರಿಗಣಿಸಿ, ಸಂಘವನ್ನು ಪುನಃಶ್ಚೇತನಗೊಳಿಸಲು ತೀರ್ಮಾನಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರು ಸದರಿ ತೀರ್ಮಾನವನ್ನು ಅನುಮೋದಿಸಿ, ಷರತ್ತಿನೊಂದಿಗೆ ಪುನಃಶ್ಚೇತನಗೊಳಿಸಲು ಕೋರಿ ಈ ಕಛೇರಿಗೆ ಉಲ್ಲೇಖ (3)ರ ಪತ್ರದೊಂದಿಗೆ ಪ್ರಸ್ತಾವನೆಯನ್ನು ಶಿಫಾರಸ್ಸು ಮಾಡಿ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯೊಂದಿಗೆ ಸದಸ್ಯರ ಮನವಿ, ಸಮಾಪನಾಧಿಕಾರಿಯವರ ನಿರ್ಣಯದ ಪ್ರತಿಯನ್ನು ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ, ಪರಿಗಣಿಸಿ, ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ : ಡಿಆರ್‌ಎಸ್/ಕಾನೂನು–3/ಡಿಎಲ್‌ಎಸ್/23/1999–2000, ದಿನಾಂಕ : 17–06–2014.**

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 72(3) ರನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂ. ಸಿಒ 139 ಸಿಎಲ್ಎಂ 2011, ದಿನಾಂಕ : 17–02–2011 ರಲ್ಲಿ ದತ್ತವಾದ ಅಧಿಕಾರದನ್ವಯ **ಡಾ॥ ಸುನೀತಾ ಸಿದ್ರಾಮ್, ಕೆ.ಸಿ.ಎಸ್. ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ** ಆದ ನಾನು ಸಮಾಪನೆಯಲ್ಲಿರುವ "**ಕೃಷಿ ಪತ್ತಿನ ಸಹಕಾರ ಸಂಘ ನಿ., ಆನಂದಪುರ, ಸಾಗರ ತಾ**" ಈ ಸಹಕಾರ ಸಂಘವನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಪುನಃಶ್ಚೇತನಗೊಳಿಸಿ ಆದೇಶಿಸಿರುತ್ತೇನೆ.

1. ಸಂಘವು ಪುನಃಶ್ಚೇತನಗೊಂಡ ಎರಡು ತಿಂಗಳುಗಳ ಒಳಗಾಗಿ ಕಾರ್ಯವ್ಯಾಪ್ತಿಯಲ್ಲಿರುವ ಭೂ ಹಿಡುವಳಿದಾರರನ್ನು ಕನಿಷ್ಠ 100 ಸದಸ್ಯರನ್ನು ಸಂಘದ ಸದಸ್ಯರಾಗಿ ನೋಂದಾಯಿಸಿ, ಷೇರು ಬಂಡವಾಳವನ್ನು ವೃದ್ಧಿಸಿಕೊಳ್ಳತಕ್ಕದ್ದು.
2. ಪ್ರತಿ ತಿಂಗಳು ಸಂಘದ ಬೈಲಾ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯನುಸಾರ ಸಂಘದ ಆಡಳಿತ ಮಂಡಳಿ ಸಭೆ ನಡೆಸಿ ಸಂಘದ ಅಭಿವೃದ್ಧಿ ಬಗ್ಗೆ ಪೂರಕವಾದ ಕ್ರಮಗಳನ್ನು ಕೈಗೊಳ್ಳತಕ್ಕದ್ದು.
3. 97ನೇ ಸಂವಿಧಾನದ ತಿದ್ದುಪಡಿಯಿಂದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳಿಗೆ ಆದ ತಿದ್ದುಪಡಿಗನುಗುಣವಾಗಿ ಸಂಘವನ್ನು ರಚಿಸಿಕೊಂಡು, ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರದ ಅನುಮೋದನೆಯನ್ನು ಪಡೆಯತಕ್ಕದ್ದು.
4. ಸಂಘದ ಉಪನಿಯಮ ತಿದ್ದುಪಡಿ ಮಾಡಿಕೊಂಡ ನಂತರ ಉಪನಿಯಮದ ಉದ್ದೇಶಗಳನ್ನು ಹಂತಹಂತವಾಗಿ ಅನುಷ್ಠಾನಗೊಳಿಸಿ, ಕಾರ್ಯರೂಪಕ್ಕೆ ತಂದು ರೈತ ಸದಸ್ಯರಿಗೆ ಕೃಷಿ ಸಾಲ, ಮತ್ತು ಕೃಷಿ ಪರಿಕರಗಳನ್ನು ಪೂರೈಸಿ, ಕಾರ್ಯನಿರ್ವಹಿಸಲು ಕ್ರಮವಿಡುವುದು.

ಸಮಾಪನಾಧಿಕಾರಿಯವರು ಆಡಳಿತ ಮಂಡಳಿ ರಚನೆಗಾಗಿ ಕೂಡಲೇ ಕ್ರಮವಿಟ್ಟು ಪ್ರಭಾರ ವಹಿಸಿಕೊಡಲು ಹಾಗೂ ಈ ಕಛೇರಿಗೆ ವರದಿ ಸಲ್ಲಿಸಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮೊಹರಿನೊಂದಿಗೆ ದಿನಾಂಕ : 17–06–2014 ರಂದು ನೀಡಿದೆ.

**P.R. 475**
**SC-10**

**ಡಾ॥ ಸುನೀತಾ ಸಿದ್ರಾಮ್**
ಸಹಕಾರ ಸಂಘಗಳ ಉಪ ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಶಿವಮೊಗ್ಗ ಜಿಲ್ಲೆ, ಸಹಕಾರ ಭವನ, ಮೊದಲನೇ ಮಹಡಿ, ಶಿವಮೊಗ್ಗ,**

ವಿಷಯ : ನಿಷ್ಕ್ರಿಯಗೊಂಡ ಶ್ರೀ ಗಜಾನನ ಟ್ರಾನ್ಸ್‌ಪೋರ್ಟ್ ನೌಕರರ ಬಳಕೆದಾರರ ಸಹಕಾರ ಸಂಘ ನಿ., ಸಾಗರ ಇದನ್ನು ಸಮಾಪನೆಗೊಳಿಸುವ ಬಗ್ಗೆ.

ಉಲ್ಲೇಖ :
1. ಆಡಳಿತಾಧಿಕಾರ ಸಭೆ ದಿನಾಂಕ : 28–05–2014 ರ ನಡವಳಿ.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪ ವಿಭಾಗ, ಸಾಗರರವರ ಪತ್ರ ಸಂ. ಎಆರ್–25/ಎಲ್‌ಕ್ಯೂಡಿ/ಸಿಆರ್–/2014–15, ದಿನಾಂಕ : 12–06–2014.
3. ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಒ 139 ಸಿಎಲ್‌ಎಂ 2011, ದಿನಾಂಕ : 17–02–2011.

**ಪ್ರಸ್ತಾವನೆ :**

ನಿಷ್ಕ್ರಿಯಗೊಂಡ **ಶ್ರೀ ಗಜಾನನ ಟ್ರಾನ್ಸ್‌ಪೋರ್ಟ್ ನೌಕರರ ಬಳಕೆದಾರರ ಸಹಕಾರ ಸಂಘ ನಿ.,** ಸಾಗರ ಈ ಸಂಘವು ನೋಂದಣಿ ಸಂ. ಎಆರ್‌ಎಸ್/1420/1966–67, ದಿನಾಂಕ : 31–10–1966 ರಂದು ನೋಂದಣಿಯಾಗಿರುತ್ತದೆ. ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ವ್ಯಾಪ್ತಿಯನ್ನು ಹೊಂದಿರುತ್ತದೆ. ಸಂಘದ ಉಪನಿಯಮದ ಉದ್ದೇಶಗಳನ್ನು ಕಾರ್ಯರೂಪಕ್ಕೆ ತಂದು, ಸಂಘದ ಚಟುವಟಿಕೆಗಳನ್ನು ಮುಂದುವರೆಸಿಕೊಂಡು ಹೋಗಲು ಸದಸ್ಯರು ಉತ್ಸುಕರಾಗಿರುವುದಿಲ್ಲ. 2014–15ನೇ ಸಾಲಿನಿಂದ 2018–19ನೇ ಸಾಲಿನವರೆಗಿನ ಆಡಳಿತ ಮಂಡಳಿ ಚುನಾವಣೆ ನಡೆಸಲು ಯಾವುದೇ ಸದಸ್ಯರು ನಾಮಪತ್ರ ಸಲ್ಲಿಸದ ಹಿನ್ನೆಲೆಯಲ್ಲಿ ಸದರಿ ಸಹಕಾರ ಸಂಘಕ್ಕೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 31(1)ರ ರೀತ್ಯಾ ಆಡಳಿತಾಧಿಕಾರಿಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪವಿಭಾಗ, ಸಾಗರ ರವರು ನೇಮಕ ಮಾಡಿರುತ್ತಾರೆ.

ಸಂಘದ ಆಡಳಿತಾಧಿಕಾರಿ ದಿನಾಂಕ : 29–03–2014 ರಂದು ಸಂಘದ ಪ್ರಭಾರ ಪಡೆದು, ಆಡಳಿತಾಧಿಕಾರಿ ಕರ್ತವ್ಯವನ್ನು ನಿರ್ವಹಿಸಿದ್ದು, ದಿನಾಂಕ : 28–05–2014 ರಂದು ನಡೆದ ಆಡಳಿತಾಧಿಕಾರಿ ಸಭೆಯ ವಿಷಯ ಸಂ. 1 ರಲ್ಲಿ ಸಂಘದ ಸದಸ್ಯರಿಗೆ ಸಂಘದ ಚಟುವಟಿಕೆಗಳನ್ನು ಮುಂದುವರೆಸಲು ಆಸಕ್ತಿ ಇರುವುದಿಲ್ಲ. ಆದ್ದರಿಂದ, ಈ ಸಂಘವು ಸ್ಥಗಿತಾವಸ್ಥೆಯಲ್ಲೇ ಇದ್ದು, ಈ ಸಹಕಾರ ಸಂಘವನ್ನು ಸಮಾಪನೆಗೊಳಿಸಲು ತೀರ್ಮಾನಿಸಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪವಿಭಾಗ, ಸಾಗರ ಇವರಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪವಿಭಾಗ, ಸಾಗರ ಇವರು ಪರಿಶೀಲಿಸಿ, ಆಡಳಿತಾಧಿಕಾರಿ ನಿರ್ಣಯವನ್ನು ಅನುಮೋದಿಸಿ, ಈ ಸಹಕಾರ ಸಂಘವನ್ನು ಸಮಾಪನೆಗೊಳಿಸಲು ಕೋರಿ, ಉಲ್ಲೇಖ (2)ರ ಪತ್ರದೊಂದಿಗೆ ಪ್ರಸ್ತಾವನೆಯನ್ನು ಈ ಕಛೇರಿಗೆ ಶಿಫಾರಸ್ಸು ಮಾಡಿ, ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ, ಪರಿಗಣಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ : ಡಿಆರ್‌ಎಸ್/ಎಲ್‌ಕ್ಯೂಡಿ/ಡಿಎಲ್‌ಎಸ್/ಸಿಆರ್–21/2014–15, ದಿನಾಂಕ : 21–06–2014.**

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 72(2) ರನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂ. ಸಿಒ 139 ಸಿಎಲ್‌ಎಂ 2011, ದಿನಾಂಕ : 17–02–2011 ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ **ಡಾ॥ ಸುನೀತಾ ಸಿದ್ರಾಮ್, ಕೆ.ಸಿ.ಎಸ್. ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ** ಆದ ನಾನು ನಿಷ್ಕ್ರಿಯಗೊಂಡ **ಶ್ರೀ ಗಜಾನನ ಟ್ರಾನ್ಸ್‌ಪೋರ್ಟ್ ನೌಕರರ ಬಳಕೆದಾರರ ಸಹಕಾರ ಸಂಘ ನಿ., ಸಾಗರ** ಈ ಸಂಘವನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73(1) ರಂತೆ **ಮಾರಾಟಾಧಿಕಾರಿ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಸಾಗರ** ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿರುತ್ತೇನೆ.

ಸಮಾಪನಾಧಿಕಾರಿಗಳು ಕೂಡಲೇ ಸಂಘದ ಪ್ರಭಾರವನ್ನು ಪಡೆದು ಪ್ರಭಾರ ಪಟ್ಟಿಯ ಪ್ರತಿಯನ್ನು ಈ ಕಛೇರಿಗೆ ಸಲ್ಲಿಸತಕ್ಕದ್ದು, ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 74 ಮತ್ತು ನಿಯಮಗಳು 1960ರ ನಿಯಮ 33ರಂತೆ ಸಮಾಪನಾಧಿಕಾರಿಯ ಕರ್ತವ್ಯ

ನಿರ್ವಹಿಸುವುದಲ್ಲದೆ, ಸಂಘದ ಇತ್ತೀಚಿನ ಲೆಕ್ಕ ತಪಾಸಣಾ ವರದಿಯನ್ನಾಧರಿಸಿ, ಈ ಕಛೇರಿಯ ಅನುಮೋದನೆ ಪಡೆದು ಸಂಘದ ಆಸ್ತಿ ಜವಾಬ್ದಾರಿಗಳನ್ನು ತರಿತ್ವವಾಗಿ ವಿಲೇವಾರಿ ಮಾಡಿ ಸಂಘದ ನೋಂದಣಿ ಕ್ರಮಾಂಕವನ್ನು ರದ್ದುಗೊಳಿಸಲು ಸೂಕ್ತ ಕ್ರಮಜರುಗಿಸುವುದು.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ : 21-06-2014 ರಂದು ನೀಡಲಾಗಿದೆ.

**P.R. 476**
**SC-10**

**ಡಾ|| ಸುನೀತಾ ಸಿದ್ರಾಮ್**
ಸಹಕಾರ ಸಂಘಗಳ ಉಪ ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಶಿವಮೊಗ್ಗ ಜಿಲ್ಲೆ, ಸಹಕಾರ ಭವನ, ಮೊದಲನೇ ಮಹಡಿ, ಶಿವಮೊಗ್ಗ,**

**ವಿಷಯ :** **ನಿಷ್ಕ್ರಿಯಗೊಂಡ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ಬಿಳುವಾಣಿ, ಸೊರಬ** ತಾಲ್ಲೂಕು ಇದನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ :**
1. ಸಹಕಾರ ಸಂಘಗಳ ಸಹಾಯಕ ನಿಬಂಧಕರು ಸಾಗರ ಉಪ ವಿಭಾಗ, ಸಾಗರ ರವರ ಪತ್ರ ಸಂ. ಎಆರ್-25/ಎಲ್‌ಕ್ಯೂಡಿ/ಸಿಆರ್-02/2014-15, ದಿನಾಂಕ : 29-05-2014.
2. ಈ ಕಛೇರಿಯ ಸಮಸಂಖ್ಯೆಯ ಕಾರಣ ಕೇಳಿ ನೋಟೀಸ್ ದಿನಾಂಕ : 03-06-2014.
3. ಸಹಕಾರ ಸಂಘಗಳ ಸಹಾಯಕ ನಿಬಂಧಕರು ಸಾಗರ ಉಪವಿಭಾಗ, ಸಾಗರ ರವರ ಪತ್ರ ಸಂ. ಎಆರ್-25/ಎಲ್‌ಕ್ಯೂಡಿ/ಸಿಆರ್- /2014-15, ದಿನಾಂಕ : 17-06-2014.
4. ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಒ 139 ಸಿಎಲ್‌ಎಂ 2011, ದಿನಾಂಕ : 17-02-2011.

**ಪ್ರಸ್ತಾವನೆ :**

**ನಿಷ್ಕ್ರಿಯಗೊಂಡ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ಬಿಳುವಾಣಿ, ಸೊರಬ** ತಾಲ್ಲೂಕು ಈ ಸಂಘವು ನೋಂದಣಿ ಸಂ. ಎಆರ್25/ನೋಂದಣಿ/ಸಿಆರ್-10/25412/1998-99, ದಿನಾಂಕ : 28-04-1998 ರಂದು ನೋಂದಣಿಯಾಗಿರುತ್ತದೆ. ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ವ್ಯಾಪ್ತಿಯನ್ನು ಹೊಂದಿರುತ್ತದೆ. ಸಂಘದ ಉಪನಿಯಮದ ಉದ್ದೇಶಗಳನ್ನು ಕಾರ್ಯರೂಪಕ್ಕೆ ತಂದು, ಕಾರ್ಯನಿರ್ವಹಿಸದೆ 1 ವರ್ಷದಿಂದ ಯಾವುದೇ ವ್ಯವಹಾರ ನಿರ್ವಹಿಸದೆ ಸ್ಥಗಿತಗೊಂಡ ಹಿನ್ನೆಲೆಯಲ್ಲಿ ಸಂಘವನ್ನು ಮುನ್ನೆಡೆಸಿಕೊಂಡು ಹೋಗಲು ಯಾವುದೇ ಸದಸ್ಯರಲ್ಲಿ ಆಸಕ್ತಿ ಇಲ್ಲದೆ ಇರುವುದರಿಂದ ಸಂಘವನ್ನು ಸಮಾಪನೆಗೊಳಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪವಿಭಾಗ, ಸಾಗರರವರು ಉಲ್ಲೇಖ (1)ರ ಪತ್ರದಲ್ಲಿ ಪ್ರಸ್ತಾವನೆಯನ್ನು ಶಿಫಾರಸ್ಸು ಮಾಡಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ, ಪರಿಗಣಿಸಿ ಈ ಕಾರಣದಿಂದ ಈ ಸಹಕಾರ ಸಂಘವನ್ನು ಏಕೆ ಸಮಾಪನೆಗೊಳಿಸಬಾರದು ? ಎಂಬ ಬಗ್ಗೆ ಲಿಖಿತ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ ಸಲ್ಲಿಸಲು ಕಾಲಾವಕಾಶ ನೀಡಿ ಈ ಕಛೇರಿಯ ಉಲ್ಲೇಖ (2) ರಲ್ಲಿ ಆಡಳಿತ ಮಂಡಳಿ ಸದಸ್ಯರಿಗೆ ಕಾರಣ ಕೇಳಿ ನೋಟೀಸ್ ನೀಡಲಾಗಿತ್ತು. ಸದರಿ ಕಾರಣ ಕೇಳಿ ನೋಟೀಸ್ ಸಂಘದ ಎಲ್ಲಾ ಆಡಳಿತ ಮಂಡಳಿ ಸದಸ್ಯರಿಗೆ ತಲುಪಿರುತ್ತದೆ. ಈ ಬಗ್ಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪವಿಭಾಗ, ಸಾಗರ ರವರು ಉಲ್ಲೇಖ (3)ರ ಪತ್ರದೊಂದಿಗೆ ಸ್ವಿಕೃತಿಯನ್ನು ಸಲ್ಲಿಸಿರುತ್ತಾರೆ. ಯಾವುದೇ ಆಡಳಿತ ಮಂಡಳಿ ಸದಸ್ಯರಿಂದ ಲಿಖಿತ ಆಕ್ಷೇಪಣೆಗಳು ಬಂದಿರುವುದಿಲ್ಲ. ಆದ್ದರಿಂದ ಆಡಳಿತ ಮಂಡಳಿಯ ಸದಸ್ಯರ ಹೇಳಿಕೆ ಏನು ಇಲ್ಲವೆಂದು ಪರಿಗಣಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ : ಡಿಆರ್‌ಎಸ್/ಎಲ್‌ಕ್ಯೂಡಿ/ಡಿಎಲ್‌ಎಸ್/ಸಿಆರ್-22/2014-15/459, ದಿನಾಂಕ : 21-06-2014.**

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 72(2) ರನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂ. ಸಿಒ 139 ಸಿಎಲ್‌ಎಂ 2011, ದಿನಾಂಕ : 17-02-2011 ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ **ಡಾ|| ಸುನೀತಾ ಸಿದ್ರಾಮ್, ಕೆ.ಸಿ.ಎಸ್. ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ** ಆದ ನಾನು **ನಿಷ್ಕ್ರಿಯಗೊಂಡ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ಬಿಳುವಾಣಿ, ಸೊರಬ** ತಾಲ್ಲೂಕು ಈ ಸಂಘವನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73(1) ರಂತೆ **ಶ್ರೀ ಪುಟ್ಟರಾಜು, ಮಾರ್ಗ ವಿಸ್ತರಣಾಧಿಕಾರಿ, ಸೊರಬ, ಹಾಲು ಉತ್ಪಾದಕರ ಸಹಕಾರ ಸಂಘಗಳ ಒಕ್ಕೂಟ ನಿ., ಮಾಚೇನಹಳ್ಳಿ, ಶಿವಮೊಗ್ಗ** ತಾ. ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿರುತ್ತೇನೆ.

ಸಮಾಪನಾಧಿಕಾರಿಗಳು ಕೂಡಲೇ ಸಂಘದ ಪ್ರಭಾರವನ್ನು ಪಡೆದು ಪ್ರಭಾರ ಪಟ್ಟಿಯ ಪ್ರತಿಯನ್ನು ಈ ಕಛೇರಿಗೆ ಸಲ್ಲಿಸತಕ್ಕದ್ದು, ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 74 ಮತ್ತು ನಿಯಮಗಳು 1960 ರ ನಿಯಮ 33 ರಂತೆ ಸಮಾಪನಾಧಿಕಾರಿಯ ಕರ್ತವ್ಯ ನಿರ್ವಹಿಸುವುದಲ್ಲದೆ, ಸಂಘದ ಇತ್ತೀಚಿನ ಲೆಕ್ಕ ತಪಾಸಣಾ ವರದಿಯನ್ನಾಧರಿಸಿ, ಈ ಕಛೇರಿಯ ಅನುಮೋದನೆ ಪಡೆದು ಸಂಘದ ಆಸ್ತಿ ಜವಾಬ್ದಾರಿಗಳನ್ನು ತ್ವರಿತವಾಗಿ ವಿಲೇವಾರಿ ಮಾಡಿ ಸಂಘದ ನೋಂದಣಿ ಕ್ರಮಾಂಕವನ್ನು ರದ್ದುಗೊಳಿಸಲು ಸೂಕ್ತ ಕ್ರಮಜರುಗಿಸುವುದು.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ : 21-06-2014 ರಂದು ನೀಡಲಾಗಿದೆ.

**P.R. 477**
**SC-10**

**ಡಾ|| ಸುನೀತಾ ಸಿದ್ರಾಮ್**
ಸಹಕಾರ ಸಂಘಗಳ ಉಪ ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬಿ.ಎಲ್. ಗೌಡ ಲೇಔಟ್, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.**

**ವಿಷಯ :** ಸ್ಥಗಿತಗೊಂಡಿರುವ ಉಣ್ಣೆ ಕೈಮಗ್ಗ ನೇಕಾರರ ಉತ್ಪಾದನಾ ಮತ್ತು ಮಾರಾಟ ಸಹಕಾರ ಸಂಘ ನಿ., ನರೇನಹಾಳ್, ಚಿತ್ರದುರ್ಗ ತಾಲ್ಲೂಕು ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

ಉಲ್ಲೇಖ :
1. ಸಹಕಾರ ಸಂಘಗಳ ಸಹಾಯಕ ನಿಬಂಧಕರು ಚಿತ್ರದುರ್ಗ ಇವರ ಪತ್ರದ ಸಂಖ್ಯೆ ಸನಿ: 30: ಸಮಾಪನೆ/2012–13, ದಿನಾಂಕ : 23–12–2013.
2. ಈ ಕಛೇರಿಯ ಕಾರಣ ಕೇಳಿ ನೋಟೀಸು ದಿನಾಂಕ : 31–12–2013.
3. ಸಹಕಾರ ಸಂಘಗಳ ನಿರೀಕ್ಷಕರು, ಚಿತ್ರದುರ್ಗ ಇವರ ಪತ್ರ ದಿನಾಂಕ : 18–06–2014.

ಪ್ರಸ್ತಾವನೆ :

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರು ಉಲ್ಲೇಖ (1)ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಸ್ಥಗಿತಗೊಂಡಿರುವ ಉಣ್ಣೆ ಕೈಮಗ್ಗ ನೇಕಾರರ ಉತ್ಪಾದನಾ ಮತ್ತು ಮಾರಾಟ ಸಹಕಾರ ಸಂಘ ನಿ., ನರೇನಹಾಳ್, ಚಿತ್ರದುರ್ಗ ತಾಲ್ಲೂಕು ಸಂಘದ ನೋಂದಣಿ ಸಂಖ್ಯೆ : ಎಆರ್‌ಸಿ–30/716/ಆರ್‌ಜಿಎನ್/24169/97–98, ದಿನಾಂಕ : 07–01–1998 ಈ ಸಂಘದ ಕಾರ್ಯ ಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಮಂಡಳಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಹರಿಸುವಲ್ಲಿ ವಿಫಲರಾಗಿರುತ್ತಾರೆ ಮತ್ತು ಸಂಘವನ್ನು ಪುನಃಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲವೆಂದು ಪ್ರಸ್ತಾವನೆ ಸಲ್ಲಿಸಿ, ಸದರಿ ಸಂಘವನ್ನು ಸಮಾಪನೆಗೊಳಿಸಲು ಕೋರಿರುತ್ತಾರೆ. ಈ ಬಗ್ಗೆ ಉಲ್ಲೇಖ (2) ರಲ್ಲಿ ಈ ಕಛೇರಿಯಿಂದ ನೀಡಿದ್ದು, ಸಂಘದ ಆಡಳಿತ ಮಂಡಳಿಯವರಿಗೆ ನೋಟೀಸು ಜಾರಿಯಾದ ಬಗ್ಗೆ ಉಲ್ಲೇಖ (3) ರಲ್ಲಿ ಸ್ವೀಕೃತಿ ಈ ಕಛೇರಿಗೆ ತಲುಪಿದೆ. ಆದಾಗ್ಯೂ ಅವರು ಯಾವುದೇ ಸಮಜಾಯಿಷಿ ಅಥವಾ ಪ್ರತಿಕ್ರಿಯೆಯನ್ನು ನೀಡದೇ ನಿರುತ್ಸಾಹ ತೋರಿಸಿರುತ್ತಾರೆ. ಈ ಸಂಘದಿಂದ ಸಂಘದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಇದರಿಂದ ಸಂಘವು ಪುನಃಶ್ಚೇತನಗೊಳಿಸುವ ಹಂತವನ್ನು ಮೀರಿರುತ್ತದೆ. ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಂಘವನ್ನು ಸಮಾಪನೆಗೊಳಿಸುವುದೇ ಸೂಕ್ತವೆಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ : ಡಿಆರ್‌ಡಿ/ಸಮಾಪನೆ/ಸಿಆರ್–34/2014–15, ದಿನಾಂಕ : 26–06–2014.**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(2)ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ. ಸಿಓ/201/ಸಿಎಲ್‌ಎಂ : 2010, ಬೆಂಗಳೂರು ದಿನಾಂಕ : 17–02–2011 ಹಾಗೂ ಕ್ರಮಾಂಕ : ಸಿಓ/139/ಸಿಎಲ್‌ಎಂ/2010, ದಿನಾಂಕ : 04–07–2011ರ ಪ್ರಕಾರ ದತ್ತವಾದ ಅಧಿಕಾರದನ್ವಯ ಜಿ. ಓಬನಾಯಕ, ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಸ್ಥಗಿತಗೊಂಡಿರುವ ಉಣ್ಣೆ ಕೈಮಗ್ಗ ನೇಕಾರರ ಉತ್ಪಾದನಾ ಮತ್ತು ಮಾರಾಟ ಸಹಕಾರ ಸಂಘ ನಿ., ನರೇನಹಾಳ್, ಚಿತ್ರದುರ್ಗ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73(1) ಅನ್ವಯ ಸಹಕಾರ ಸಂಘಗಳ ನಿರೀಕ್ಷಕರು, ಚಿತ್ರದುರ್ಗ ತಾಲ್ಲೂಕು, ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73(1) ಮತ್ತು 74 ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು ಹಾಗೂ ನಿಬಂಧಕರ ಸುತ್ತೋಲೆಗೆ ಅನುಗುಣವಾಗಿ ಸಂಘದ ಆಸ್ತಿ–ಜವಾಬ್ದಾರಿ ವಿಲೇವಾರಿ ಮಾಡಿ ನೋಂದಣಿ ರದ್ಧತಿಗೆ ಪ್ರಸ್ತಾವೆ ಸಲ್ಲಿಸುವಂತೆ ಆದೇಶಿಸಿರುತ್ತಾರೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನಾಂಕ : 26–06–2014 ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

P.R. 478
SC-10

## ನಗರಾಭಿವೃದ್ಧಿ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ : ನಅಇ 82 ಬೆಮಪ್ರಾ 2013(ಭಾಗ), ಬೆಂಗಳೂರು, ದಿನಾಂಕ : 27–06–2014.**

ಸರ್ಕಾರದ ಅಧಿಸೂಚನೆ ಸಂಖ್ಯೆ : ನಅಇ 355 ಟಿಟಿಪಿ 1996, ದಿನಾಂಕ : 02–09–1996 ರನ್ವಯ ಕೆಲವು ಪುರಸಭೆಗಳನ್ನು ಯೋಜನಾ ಪ್ರಾಧಿಕಾರಗಳನ್ನಾಗಿ ರಚಿಸಲಾಗಿದೆ. ಸದರಿ ಅಧಿಸೂಚನೆಯಲ್ಲಿನ ಇಳಕಲ್ ಪುರಸಭೆಯನ್ನು ಯೋಜನಾ ಪ್ರಾಧಿಕಾರವನ್ನಾಗಿ ರಚಿಸಿರುವುದನ್ನು ಹಿಂಪಡೆಯಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 4–ಎ(1)ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಕರ್ನಾಟಕ ಸರ್ಕಾರವು ಇಳಕಲ್ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿ ಪ್ರದೇಶವನ್ನು ವಿಸ್ತರಿಸಿ ವಿಸ್ತರಿಸಲಾದ ಪ್ರದೇಶಕ್ಕೆ ಸ್ಥಳೀಯ ಯೋಜನಾ ಪ್ರದೇಶವೆಂದು ಘೋಷಿಸಲಾಗಿದೆ. ಹಾಗೂ ಇದೇ ಕಾಯ್ದೆಯ ಕಲಂ 4–ಸಿ(1) ರನ್ವಯ ವಿಸ್ತರಿಸಲಾದ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಗೆ ಪ್ರತ್ಯೇಕ ಯೋಜನಾ ಪ್ರಾಧಿಕಾರಗಳನ್ನು ರಚಿಸಿ ಘೋಷಿಸಲಾಗಿದೆ.

ವಿಸ್ತರಿಸಲಾದ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಯಲ್ಲಿನ ಗ್ರಾಮ/ಪಟ್ಟಣಗಳ ವಿವರಗಳನ್ನು ಅನುಬಂಧ–1 ರಲ್ಲಿ ಹಾಗೂ ಅನುಬಂಧ–2 ರಲ್ಲಿ ವಿಸ್ತೃತ ಇಳಕಲ್ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಗಡಿಯ ವಿವರಗಳನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎಂ. ವಾಸುದೇವರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**ಅನುಬಂಧ–1**

| ಕ್ರಮ ಸಂಖ್ಯೆ | ಪಟ್ಟಣ/ಗ್ರಾಮದ ಹೆಸರು | ಸ. ನಂ./ಇತ್ಯಾದಿ |
|---|---|---|
| 1. | ಇಳಕಲ್ಲ ಪಟ್ಟಣ | ಸಂಪೂರ್ಣ ಕಂದಾಯ ಗ್ರಾಮ |
| 2. | ತೊಂಡಿಹಾಳ ಗ್ರಾಮ | –ಸದರ– |
| 3. | ಹಿರೇಉಪನಾಳ ಗ್ರಾಮ | –ಸದರ– |
| 4. | ಗೋನಾಳ ಎಸ್.ಬಿ. ಗ್ರಾಮ | –ಸದರ– |
| 5. | ಗೋನಾಳ ಎಸ್.ಟಿ. ಗ್ರಾಮದ | –ಸದರ– |
| 6. | ಗೋರಬಾಳ ಗ್ರಾಮ | –ಸದರ– |
| 7. | ಬಲಕುಂದಿ ಗ್ರಾಮ | –ಸದರ– |
| 8. | ಹೆರೂರು ಗ್ರಾಮ | –ಸದರ– |
| 9. | ಇಂಗಳಗಿ ಗ್ರಾಮ | –ಸದರ– |
| 10. | ಹನಮನಾಳ ಗ್ರಾಮ | –ಸದರ– |
| 11. | ಸಂಕಲಾಪುರ ಗ್ರಾಮ | –ಸದರ– |
| 12. | ಗುಡೂರ ಗ್ರಾಮ | –ಸದರ– (ಸದರಿ ಗ್ರಾಮದ ಉಡಾಫ್/ಪೋಕಳ ಸ.ನಂ. ಗಳನ್ನು ಹೊರತುಪಡಿಸಿ) |

**ಟಿ.ಎಂ. ವಾಸುದೇವರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**ಅನುಬಂಧ–2**

**ಇಲಕಲ್ಲ ಪಟ್ಟಣದ ಪ್ರಸ್ತಾವಿತ ಸ್ಥಳೀಯ ಯೋಜನಾ ಪ್ರದೇಶದ ಎಲ್ಲೆಯ ವಿವರ**

ಇಲಕಲ್ಲ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಎಲ್ಲೆಯು ಹೆರೂರ ಗ್ರಾಮದ ಸ.ನಂ. 56ರ ವಾಯವ್ಯ ಮೂಲೆಯ ಪ್ರಾರಂಭಿಕ (P) ಬಿಂದುವಿನಿಂದ ರಿ.ಸ.ನಂ. 56,57 ರ ಉತ್ತರದ ಗಡಿಯಗುಂಟ ಪೂರ್ವಕ್ಕೆ ಚಲಿಸಿ, ರಾಷ್ಟ್ರೀಯ ಹೆದ್ದಾರಿ 13ನ್ನು ದಾಟಿ ರಿ.ಸ.ನಂ. 58ರ ಉತ್ತರದ ಗಡಿಯಗುಂಟ ಪೂರ್ವಕ್ಕೆ ಚಲಿಸುತ್ತಾ ರಿ.ಸ.ನಂ. 62 ರ ನೈರುತ್ಯ ಮೂಲೆಯನ್ನು ಸೇರುತ್ತದೆ. ನಂತರ ಪಶ್ಚಿಮದ ಗಡಿಯಗುಂಟ ಉತ್ತರಕ್ಕೆ ಚಲಿಸಿ ರಿ.ಸ.ನಂ. 62ರ ವಾಯವ್ಯ ಮೂಲೆಯನ್ನು ಸೇರುತ್ತದೆ. ಅಲ್ಲಿಂದ ರಿ.ಸ.ನಂ. 62ರ ವಾಯವ್ಯ ಮೂಲೆಯಿಂದ ಪೂರ್ವಕ್ಕೆ ಚಲಿಸಿ ರಿ.ಸ.ನಂ. 64, 126, 65, 75ರ ಉತ್ತರದ ಗಡಿಯಗುಂಟ ಪೂರ್ವಕ್ಕೆ ಚಲಿಸಿ ರಿ.ಸ.ನಂ. 76ರ ವಾಯವ್ಯ ಮೂಲೆಯನ್ನು ಸೇರುತ್ತದೆ. ಅಲ್ಲಿಂದ ರಿ.ಸ.ನಂ. 77, 78, 79, 100, 101, 102, 103, 106, 107, 108, 109, 110ರ ಉತ್ತರದ ಗಡಿಯಗುಂಟ ಪೂರ್ವಕ್ಕೆ ಚಲಿಸಿ ಹಳ್ಳವನ್ನು ತಲುಪುತ್ತದೆ. ನಂತರ ಹಳ್ಳವನ್ನು ದಾಟಿ ಹಳ್ಳದ ಗಡಿಯಗುಂಟ ದಕ್ಷಿಣಕ್ಕೆ ಚಲಿಸಿ ಇಂಗಳಗಿ ಗ್ರಾಮದ ರಿ.ಸ.ನಂ. 6ರ ವಾಯವ್ಯ ಮೂಲೆಯನ್ನು ಸೇರುತ್ತದೆ. ಅಲ್ಲಿಂದ ಇಂಗಳಗಿ ಗ್ರಾಮದ ಸ.ನಂ. 6, 5, 3, 67, 66, 65, 61, 60, 59, 55 ರ ಉತ್ತರದ ಗಡಿಯಗುಂಟ ಪೂರ್ವಕ್ಕೆ ಚಲಿಸಿ ರಿ.ಸ.ನಂ. 55 ರ ಈಶಾನ್ಯ ಮೂಲೆಯನ್ನು ತಲುಪುತ್ತದೆ. ಅಲ್ಲಿಂದ ರಿ.ಸ.ನಂ. 55,54, 53, 48, 47 ಹಾಗೂ ಗೋರಬಾಳ ಗ್ರಾಮದ ಸ.ನಂ. 37, 38, 39, 42, 43, 46, 47, 48 ರ ಪೂರ್ವದ ಗಡಿಯಗುಂಟ ದಕ್ಷಿಣಕ್ಕೆ ಚಲಿಸಿ ರಿ.ಸ.ನಂ. 48 ರ ಆಗ್ನೇಯ ಮೂಲೆಯನ್ನು ಸೇರುತ್ತದೆ ಅಲ್ಲಿಂದ ರಿ.ಸ.ನಂ. 48 ಹಾಗೂ 58ರ ದಕ್ಷಿಣದ ಗಡಿಯಗುಂಟ ಪಶ್ಚಿಮಕ್ಕೆ ಚಲಿಸಿ ರಿ.ಸ.ನಂ. 58 ರ ನೈರುತ್ಯ ಮೂಲೆಯನ್ನು ಸೇರುತ್ತದೆ. ಅಲ್ಲಿಂದ ರಿ.ಸ.ನಂ. 59ರ ಪೂರ್ವದ ಗಡಿಯಗುಂಟ ದಕ್ಷಿಣಕ್ಕೆ ಚಲಿಸಿ ಗುಡೂರ ಗ್ರಾಮದ ಗಡಿಯನ್ನು ಸೇರುತ್ತದೆ. ಅಲ್ಲಿಂದ ಗುಡೂರ ಗ್ರಾಮದ ಸ.ನಂ. 23, 24, 27, 28ರ ಪೂರ್ವದ ಗಡಿಯಗುಂಟ ದಕ್ಷಿಣಕ್ಕೆ ಚಲಿಸಿ ನಂತರ ಸ.ನಂ. 30, 32 ರ ಉತ್ತರದ ಗಡಿಯಗುಂಟ ಪೂರ್ವಕ್ಕೆ ಚಲಿಸಿ ನಂತರ ಸ.ನಂ. 32, 31, 33, 35 ರ ಪೂರ್ವದ ಗಡಿಯಗುಂಟ ದಕ್ಷಿಣಕ್ಕೆ ಚಲಿಸಿ ರಿ.ಸ.ನಂ. 35 ರ ಆಗ್ನೇಯ ಮೂಲೆಯನ್ನು ಸೇರುತ್ತದೆ. ಅಲ್ಲಿಂದ ರಿ.ಸ.ನಂ. 35, 36, 40 ರ ದಕ್ಷಿಣದ ಗಡಿಯಗುಂಟ ಪಶ್ಚಿಮಕ್ಕೆ ಚಲಿಸಿ ರಿ.ಸ.ನಂ. 9, 8, 4, 3, 2, 1 ರ ಪೂರ್ವದ ಗಡಿಯಗುಂಟ ದಕ್ಷಿಣಕ್ಕೆ ಚಲಿಸಿ ರಾಷ್ಟ್ರೀಯ ಹೆದ್ದಾರಿ 13ನ್ನು ದಾಟಿ ಗುಡೂರು ಗ್ರಾಮಠಾಣೆಯನ್ನು ಸುತ್ತುವರೆದು ಸ.ನಂ. 62, 61ರ ಪೂರ್ವದ ಗಡಿಯಗುಂಟ ದಕ್ಷಿಣಕ್ಕೆ ಚಲಿಸಿ ರಿ.ಸ.ನಂ. 61ರ ದಕ್ಷಿಣದ ಗಡಿಯಗುಂಟ ಪಶ್ಚಿಮಕ್ಕೆ ಚಲಿಸಿ ರಿ.ಸ.ನಂ. 61, 63, 64, 67 ರ ಪಶ್ಚಿಮದ ಗಡಿಯಗುಂಟ ಉತ್ತರಕ್ಕೆ ಚಲಿಸಿ ಹನಮನಾಳದ ಗಡಿಯನ್ನು ಸೇರುತ್ತದೆ. ನಂತರ ಹನಮನಾಳ ಗ್ರಾಮದ ಸ.ನಂ. 42ರ ದಕ್ಷಿಣದ ಗಡಿಯಗುಂಟ ಪಶ್ಚಿಮಕ್ಕೆ ಚಲಿಸಿ ರಿ.ಸ.ನಂ. 4, 5, 6ರ ದಕ್ಷಿಣದ ಗಡಿಯಗುಂಟ ಪಶ್ಚಿಮಕ್ಕೆ ಚಲಿಸಿ ರಿ.ಸ.ನಂ. 6ರ ನೈರುತ್ಯ ಮೂಲೆಯನ್ನು ಸೇರುತ್ತದೆ. ಅಲ್ಲಿಂದ ದಕ್ಷಿಣಕ್ಕೆ ಚಲಿಸಿ ರಿ.ಸ.ನಂ. 7 ಮತ್ತು ಗೋನಾಳ ಎಸ್.ಟಿ. ರಿ.ಸ.ನಂ. 49ರ ಪೂರ್ವದ ಗಡಿಯಗುಂಟ ದಕ್ಷಿಣಕ್ಕೆ ಚಲಿಸಿ ಸ.ನಂ. 49ರ ಆಗ್ನೇಯ ಮೂಲೆಯನ್ನು ಸೇರುತ್ತದೆ ಅಲ್ಲಿಂದ ಗೋನಾಳ ಎಸ್.ಟಿ. ಗ್ರಾಮದ ಸ.ನಂ. 49, 50, 51, 52, 62, 63, 64ರ ದಕ್ಷಿಣದ ಗಡಿಗುಂಟ ಪಶ್ಚಿಮಕ್ಕೆ ಚಲಿಸಿ ಹಳ್ಳವನ್ನು ಸೇರುತ್ತದೆ. ಹಳ್ಳದ ಗಡಿಯಗುಂಟ ದಕ್ಷಿಣಕ್ಕೆ ಚಲಿಸಿ ಸಂಕಲಾಪೂರ ಗ್ರಾಮದ ಸ.ನಂ. 1 ರ ಆಗ್ನೇಯ ಮೂಲೆಯನ್ನು ಸೇರುತ್ತದೆ. ಅಲ್ಲಿಂದ ರಿ.ಸ.ನಂ. 2, 3, 5, 7, 8, 11, 12, 13, 14, 15ರ ಪೂರ್ವದ ಗಡಿಯಗುಂಟ ದಕ್ಷಿಣಕ್ಕೆ ಚಲಿಸಿ ರಿ.ಸ.ನಂ. 15, 16ರ ದಕ್ಷಿಣದ ಗಡಿಯಗುಂಟ ಪಶ್ಚಿಮಕ್ಕೆ ಚಲಿಸಿ ಸ.ನಂ. 16ರ ನೈರುತ್ಯ ಮೂಲೆಯನ್ನು ಸೇರುತ್ತದೆ. ಅಲ್ಲಿಂದ ರಿ.ಸ.ನಂ. 16, 17, 18ರ ಪಶ್ಚಿಮದ ಗಡಿಯಗುಂಟ ಉತ್ತರಕ್ಕೆ ಚಲಿಸಿ ನಂತರ ಬಲಕುಂದಿ ಗ್ರಾಮದ ಸ.ನಂ. 209, 210, 212, 215, 217, 218, 223, 224, 229, 230, 231, 261, 264, 265, 281, 282, 283, 285, 286 ರ ದಕ್ಷಿಣದ ಗಡಿಯಗುಂಟ ಪಶ್ಚಿಮಕ್ಕೆ ಚಲಿಸಿ ಸ.ನಂ. 286ರ ನೈರುತ್ಯ

ಮೂಲೆಯನ್ನು ಸೇರುತ್ತದೆ. ಅಲ್ಲಿಂದ ರಿ.ಸ.ನಂ. 286ರ ನೈರುತ್ಯ ಮೂಲೆಯಿಂದ ಸ.ನಂ. 286, 287, 290, 291, 292, 293, 18, 19, 20, 60, 61, 65, 66, 67, 98, 99, 105, 106, 107 ಹಾಗೂ ಇಲಕಲ್ಲ ಗ್ರಾಮ ಸ.ನಂ. 125, 126, 129, 130, 131, 135, 137, 138, 139 ರ ಪಶ್ಚಿಮದ ಗಡಿಯಗುಂಟ ಉತ್ತರಕ್ಕೆ ಚಲಿಸಿ ಸ.ನಂ. 139ರ ವಾಯವ್ಯ ಮೂಲೆಯನ್ನು ಸೇರುತ್ತದೆ. ನಂತರ ಸ.ನಂ. 139, 140 ರ ಉತ್ತರದ ಗಡಿಯಗುಂಟ ಪೂರ್ವಕ್ಕೆ ಚಲಿಸಿ ತೊಂಡಿಹಾಳ ಗ್ರಾಮದ ಸ.ನಂ. 61ರ ನೈರುತ್ಯ ಮೂಲೆಯನ್ನು ಸೇರುತ್ತದೆ. ನಂತರ ತೊಂಡಿಹಾಳ ಗ್ರಾಮದ ಸ.ನಂ. 61, 62, 63, 64, 65, 66, 67 ಹಾಗೂ ಹೆರೂರ ಗ್ರಾಮದ ಸ.ನಂ. 50, 51, 54, 55, 56 ರ ಪಶ್ಚಿಮದ ಗಡಿಯಗುಂಟ ಉತ್ತರಕ್ಕೆ ಚಲಿಸಿ ನಂತರ ಹೆರೂರ ಗ್ರಾಮದ ಸ.ನಂ. 56ರ ವಾಯವ್ಯ ಮೂಲೆಯ ಪ್ರಾರಂಭಿಕ (P) ಬಿಂದುವನ್ನು ಸೇರುತ್ತದೆ.

**P.R. 485**
**SC-50**

**ಟಿ.ಎಂ. ವಾಸುದೇವರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

## ನಿರ್ದೇಶಕರವರ ಕಛೇರಿ, ತಾಂತ್ರಿಕ ಶಿಕ್ಷಣ ಇಲಾಖೆ

### ತಿದ್ದುಪಡಿ ಆದೇಶ

**ಸಂಖ್ಯೆ : ಡಿಟಿಇ 20 ಡಿಇಕ್ಯೂ (1) 2013/1100, ಬೆಂಗಳೂರು, ದಿನಾಂಕ : 30–06–2014.**

**ವಿಷಯ :** ಕು॥ ಮೇಧಾ ಜನಾರ್ಧನ ಜೈವಂತ, ಉಪನ್ಯಾಸಕರು, ಸರ್ಕಾರಿ ಮಹಿಳಾ ಪಾಲಿಟೆಕ್ನಿಕ್, ಬೋಂದೇಲ್, ಮಂಗಳೂರು ಇವರು ಸುಳ್ಳು ಜಾತಿ ಪ್ರಮಾಣ ಪತ್ರ ಸಲ್ಲಿಸಿ ಸರ್ಕಾರಿ ಸೇವೆಗೆ ಸೇರಿರುವ ಬಗ್ಗೆ ದಂಡನೆಯ ಆದೇಶ.

**ಉಲ್ಲೇಖ :**
1. ಈ ಕಛೇರಿಯ ಆದೇಶದ ಸಂಖ್ಯೆ : ಡಿಟಿಇ 20 ಡಿಇಕ್ಯೂ(1) 2013/1054, ದಿನಾಂಕ : 26–06–2014.
2. ಅಡಿಷನಲ್ ಡೈರೆಕ್ಟರ್ ಜನರಲ್ ಆಫ್ ಪೊಲೀಸ್‌ರವರ ಕಛೇರಿ, ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂ. ಜಾವಿ:01:ಮಂವಿ:ನಾಹಜಾನಿ:2011, ದಿನಾಂಕ : 27–06–2014.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಕು॥ ಮೇಧಾ ಜನಾರ್ಧನ ಜೈವಂತ, ಉಪನ್ಯಾಸಕರು, ಸರ್ಕಾರಿ ಮಹಿಳಾ ಪಾಲಿಟೆಕ್ನಿಕ್, ಬೋಂದೇಲ್, ಮಂಗಳೂರು ಇವರನ್ನು ಮೂಲತಃ **ಪ್ರವರ್ಗ–Iರ ಹಿಂದೂ "ಮೊಗೆರ" ಜಾತಿಗೆ ಸೇರಿದ್ದು, "ಮೋಗೇರ" (MOGER) ಪರಿಶಿಷ್ಟ ಜಾತಿ** ಎಂದು ಸುಳ್ಳುಜಾತಿ ಪ್ರಮಾಣ ಪತ್ರ ಸಲ್ಲಿಸಿ ಉಸನ್ಯಾಸಕ ಹುದ್ದೆಗೆ ನೇಮಕಾತಿ ಪಡೆದಿರುವುದು ಸಾಬೀತಾದ ಹಿನ್ನೆಲೆಯಲ್ಲಿ ಹಾಗೂ ಉಲ್ಲೇಖಿತ (2)ರ ಪತ್ರದಲ್ಲಿ ತಿಳಿಸಿರುವಂತೆ, ಭಾಗಶಃ ತಿದ್ದುಪಡಿ ಮಾಡಿ, ಕು॥ ಮೇಧಾ ಜನಾರ್ಧನ ಜೈವಂತ, ಉಪನ್ಯಾಸಕರು, ಸರ್ಕಾರಿ ಮಹಿಳಾ ಪಾಲಿಟೆಕ್ನಿಕ್, ಬೋಂದೇಲ್, ಮಂಗಳೂರು ಇವರನ್ನು ಮೂಲತಃ ಪ್ರವರ್ಗ– I ರ ಹಿಂದೂ "ಮೊಗೇರ" ಜಾತಿಗೆ ಸೇರಿದ್ದು "ಮೊಗೆರ್" (MOGER) ಪರಿಶಿಷ್ಟ ಜಾತಿ ಎಂದು ಸುಳ್ಳುಜಾತಿ ಪ್ರಮಾಣಪತ್ರ ಸಲ್ಲಿಸಿ ಉಪನ್ಯಾಸಕ ಹುದ್ದೆಗೆ ನೇಮಕಾತಿ ಪಡೆದಿರುವುದು ಸಾಬೀತಾದ ಹಿನ್ನಲೆಯಲ್ಲಿ ಎಂದು ಓದಿಕೊಳ್ಳತಕ್ಕದ್ದು. ದಿನಾಂಕ : 26–06–2014ರ ಆದೇಶದಲ್ಲಿ ಉಳಿದ ಯಾವುದೇ ಭಾಗ ಮಾರ್ಪಾಡು ಇರುವುದಿಲ್ಲ ಎಂದು ಈ ಮೂಲಕ ತಿಳಿಸಲಾಗಿದೆ.

**P.R. 491**
**SC-10**

**ನಿರ್ದೇಶಕರು**
ನೇಮಕಾತಿ ಮತ್ತು ಶಿಸ್ತು ಪ್ರಾಧಿಕಾರಿ

## ಪೊಲೀಸ್ ಕಮೀಷನರ್‌ರವರ ಕಛೇರಿ, ನಂ. 1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ

### ಅಧಿಸೂಚನೆ

**ಸಂಖ್ಯೆ : ಸಿಬಿ/13/ಡಿಸಿಪಿ/ಸಂ.ಪೂ/2014, ಬೆಂಗಳೂರು, ದಿನಾಂಕ : 25–06–2014.**

ಬೆಂಗಳೂರು ನಗರ–ಸದಾಶಿವನಗರ ಸಂಚಾರ ಪೊಲೀಸ್ ಠಾಣೆಯ ವ್ಯಾಪ್ತಿಗೆ ಸೇರಿದ ಸದಾಶಿವನಗರ ಕ್ಲಬ್‌ನ ಮುಂದಿನ 5ನೇ ಮುಖ್ಯ ರಸ್ತೆ, 6ನೇ ಮುಖ್ಯ ರಸ್ತೆ, ಮತ್ತು 15ನೇ ಅಡ್ಡ ರಸ್ತೆಗಳಲ್ಲಿ ಕ್ಲಬ್‌ಗೆ ಬರುವ ಸದಸ್ಯರುಗಳು ತಮ್ಮ ವಾಹನಗಳನ್ನು ರಸ್ತೆಯ ಎರಡೂ ಕಡೆಗಳಲ್ಲಿ ನಿಲ್ಲಿಸುತ್ತಿದ್ದು, ಇದರಿಂದ ಸಂಚಾರ ಸ್ಥಗಿತಗೊಂಡು ಸುಗಮ ಸಂಚಾರಕ್ಕೆ ಅಡಚಣೆ ಉಂಟಾಗುತ್ತಿರುತ್ತದೆ. ಅಲ್ಲದೆ ಹತ್ತಿರದಲ್ಲೇ ಇರುವ ಪೂರ್ಣ ಪ್ರಜ್ಞಾ ಶಾಲೆಗೆ ಬರುವ ಶಾಲಾ ಮಕ್ಕಳು, ಪೋಷಕರುಗಳು ಹಾಗೂ ಸ್ಥಳೀಯ ನಿವಾಸಿಗಳಿಗೆ ತೊಂದರೆಯಾಗುತ್ತಿರುವ ಕಾರಣ ಸಾರ್ವಜನಿಕ ಹಿತಾಸಕ್ತಿಗನುಗುಣವಾಗಿ ಹಾಗೂ ಸುಗಮ ಸಂಚಾರದ ವ್ಯವಸ್ಥೆಗಾಗಿ ಸದಾಶಿವನಗರ 5ನೇ ಮುಖ್ಯ ರಸ್ತೆಯಲ್ಲಿ ರಸ್ತೆಯ ಉತ್ತರ ದಿಕ್ಕಿಗೆ ವಾಹನಗಳ ನಿಲುಗಡೆಗೆ ಅವಕಾಶ ಕಲ್ಪಿಸುವುದು ಹಾಗೂ ರಸ್ತೆಯ ದಕ್ಷಿಣ ದಿಕ್ಕಿಗೆ ವಾಹನಗಳ ನಿಲುಗಡೆಯನ್ನು ನಿಷೇಧಿಸುವುದು, ಸದಾಶಿವನಗರ 6ನೇ ಮುಖ್ಯ ರಸ್ತೆಯಲ್ಲಿ ರಸ್ತೆಯ ದಕ್ಷಿಣ ದಿಕ್ಕಿಗೆ ವಾಹನಗಳ ನಿಲುಗಡೆಗೆ ಅವಕಾಶ ಕಲ್ಪಿಸುವುದು ಹಾಗೂ ರಸ್ತೆಯ ಉತ್ತರ ದಿಕ್ಕಿಗೆ ವಾಹನಗಳ ನಿಲುಗಡೆಯನ್ನು ನಿಷೇಧಿಸುವುದು ಹಾಗೂ ಸದಶಿವನಗರ 15ನೇ ಅಡ್ಡ ರಸ್ತೆಯಲ್ಲಿ ರಸ್ತೆಯ ಪೂರ್ವ ದಿಕ್ಕಿಗೆ ವಾಹನಗಳ ನಿಲುಗಡೆಗೆ ಅವಕಾಶ ಕಲ್ಪಿಸುವುದು ಹಾಗೂ ರಸ್ತೆಯ ಪಶ್ಚಿಮ ದಿಕ್ಕಿಗೆ ವಾಹನಗಳ ನಿಲುಗಡೆಯನ್ನು ನಿಷೇಧಿಸುವುದು ಅತ್ಯವಶ್ಯಕವಾಗಿರುತ್ತದೆ.

ಆದ್ದರಿಂದ ಕಲಂ 115 ಐ.ಎಂ.ವಿ. ಕಾಯ್ದೆ 1988 ಹಾಗೂ ಕಲಂ–3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನ್ನ ಅಧಿಕಾರದ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ರಾಘವೇಂದ್ರ ಔರಾದ್‌ಕರ್ ಐ.ಪಿ.ಎಸ್. ಪೊಲೀಸ್ ಆಯುಕ್ತರು, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ನಿರ್ಬಂಧನೆಗಳನ್ನು ಆದೇಶಿಸಿರುತ್ತೇನೆ.

1. **ಸದಾಶಿವನಗರ 5ನೇ ಮುಖ್ಯ ರಸ್ತೆಯಲ್ಲಿ 15ನೇ ಕ್ರಾಸ್ ಜಂಕ್ಷನ್‌ನಿಂದ 17ನೇ ಕ್ರಾಸ್ ರಸ್ತೆಯ ಜಂಕ್ಷನ್‌ವರೆಗೆ ರಸ್ತೆಯ ಉತ್ತರ ದಿಕ್ಕಿಗೆ ವಾಹನಗಳ ನಿಲುಗಡೆಗೆ ಅವಕಾಶ ನೀಡಲಾಗಿದೆ ಮತ್ತು ರಸ್ತೆಯ ದಕ್ಷಿಣ ದಿಕ್ಕಿಗೆ ವಾಹನಗಳ ನಿಲುಗಡೆಯನ್ನು ನಿಷೇಧಿಸಲಾಗಿದೆ.**
2. **ಸದಾಶಿವನಗರ 6ನೇ ಮುಖ್ಯ ರಸ್ತೆಯಲ್ಲಿ 15ನೇ ಕ್ರಾಸ್ ಜಂಕ್ಷನ್‌ನಿಂದ 17ನೇ ಕ್ರಾಸ್ ರಸ್ತೆಯ ಜಂಕ್ಷನ್‌ವರೆಗೆ ರಸ್ತೆಯ ಉತ್ತರ ದಿಕ್ಕಿಗೆ ವಾಹನಗಳ ನಿಲುಗಡೆಗೆ ಅವಕಾಶ ನೀಡಲಾಗಿದೆ. ಮತ್ತು ರಸ್ತೆಯ ದಕ್ಷಿಣ ದಿಕ್ಕಿಗೆ ವಾಹನಗಳ ನಿಲುಗಡೆಯನ್ನು ನಿಷೇಧಿಸಲಾಗಿದೆ.**

3. **ಸದಾಶಿವನಗರ 15ನೇ ಅಡ್ಡ ರಸ್ತೆಯಲ್ಲಿ 6ನೇ ಮುಖ್ಯ ರಸ್ತೆ ಜಂಕ್ಷನ್‌ನಿಂದ 4ನೇ ಮುಖ್ಯ ರಸ್ತೆ ಜಂಕ್ಷನ್‌ವರೆಗೆ ರಸ್ತೆಯ ಪೂರ್ವ ದಿಕ್ಕಿಗೆ ವಾಹನಗಳ ನಿಲುಗಡೆಗೆ ಅವಕಾಶ ನೀಡಲಾಗಿದೆ. ಮತ್ತು ರಸ್ತೆಯ ಪಶ್ಚಿಮ ದಿಕ್ಕಿಗೆ ವಾಹನಗಳ ನಿಲುಗಡೆಯನ್ನು ನಿಷೇಧಿಸಲಾಗಿದೆ.**

ಅಂತೆಯೇ ಕಲಂ–116 ಐ.ಎಂ.ವಿ. ಕಾಯ್ದೆ 1988 ಹಾಗೂ ಕಲಂ–4 ಕೆ.ಟಿ.ಸಿ. ಆಕ್ಟ್ 1960ರಲ್ಲಿ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸಹ ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ವ್ಯವಸ್ಥೆಯನ್ನು ದಿನಾಂಕ : 30–06–2014 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ : 25–06–2014 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**P.R. 499**
**SC-10**

**ರಾಘವೇಂದ್ರ. ಹೆಚ್. ಔರಾದಕರ್, ಐ.ಪಿ.ಎಸ್.**
ಪೊಲೀಸ್ ಕಮೀಷನರ್, ಬೆಂಗಳೂರು ನಗರ.

## ಪೊಲೀಸ್ ಕಮೀಷನರ್‌ರವರ ಕಛೇರಿ, ನಂ. 1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ

## ಅಧಿಸೂಚನೆ

**ಸಂಖ್ಯೆ : ಸಿಬಿ/15/ಡಿಸಿಪಿ/ಸಂ.ಪೂ/2014, ಬೆಂಗಳೂರು, ದಿನಾಂಕ : 27–06–2014.**

ಬೆಂಗಳೂರು ನಗರ–ಹೈಗ್ರೌಂಡ್ಸ್ ಸಂಚಾರ ಪೊಲೀಸ್ ಠಾಣೆಯ ಸರಹದ್ದಿನಲ್ಲಿ ಬರುವ ಸೌತ್ ಸೆಂಟ್ರಲ್ ಸ್ಟ್ರೀಟ್ ರಸ್ತೆಯಲ್ಲಿ ರಸ್ತೆಯ ಎರಡು ಕಡೆ ವಾಹನಗಳು ನಿಂತು ಇತರೆ ವಾಹನಗಳ ಸಂಚಾರಕ್ಕೆ ಅಡಚಣೆ ಉಂಟಾಗುತ್ತಿರುತ್ತದೆ. ಈ ರಸ್ತೆಯಲ್ಲಿ ವಾಹನಗಳ ಸುಗಮ ಸಂಚಾರಕ್ಕೆ ಅನುಕೂಲವಾಗುವಂತೆ ರಸ್ತೆಯ ಉತ್ತರ ಭಾಗದಲ್ಲಿ ಎಲ್ಲಾ ರೀತಿಯ ವಾಹನಗಳ ನಿಲುಗಡೆ ನಿಷೇಧಿಸಿ ರಸ್ತೆಯ ದಕ್ಷಿಣ ಭಾಗದಲ್ಲಿ ವಾಹನಗಳ ನಿಲುಗಡೆಗೆ ವ್ಯವಸ್ಥೆ ಮಾಡಬೇಕಾಗಿರುವುದು ಅವಶ್ಯಕತೆ ಇರುತ್ತದೆ.

ಆದ್ದರಿಂದ ಕಲಂ 115 ಮೋಟಾರು ವಾಹನ ಕಾಯ್ದೆ, 1988 ಹಾಗೂ ಕಲಂ–3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ರಾಘವೇಂದ್ರ ಔರಾದ್‌ಕರ್, ಪೊಲೀಸ್ ಆಯುಕ್ತರು, ಬೆಂಗಳೂರು ನಗರ ಆದ ನಾನು ಈ ಕೆಳಕಂಡ ಸಂಚಾರ ನಿರ್ಬಂಧನೆಗಳನ್ನು ಆದೇಶಿಸಿರುತ್ತೇನೆ.

**"ಸೌತ್ ಸೆಂಟ್ರಲ್ ಸ್ಟ್ರೀಟ್ ರಸ್ತೆಯಲ್ಲಿ ಸಂಪಿಗೆ ರಸ್ತೆಯಿಂದ ಸಿರೂರ್ ಪಾರ್ಕ್ ರಸ್ತೆಯ ವರೆಗೆ ರಸ್ತೆಯ ಉತ್ತರ ಭಾಗದಲ್ಲಿ ಎಲ್ಲಾ ರೀತಿಯ ವಾಹನಗಳ ನಿಲುಗಡೆಯನ್ನು ನಿಷೇಧಿಸಿ, ರಸ್ತೆಯ ದಕ್ಷಿಣ ಭಾಗದಲ್ಲಿ ಕಾರು ಮತ್ತು ದ್ವಿಚಕ್ರ ವಾಹನಗಳ ನಿಲುಗಡೆಗೆ ವ್ಯವಸ್ಥೆ ಮಾಡಲಾಗಿರುತ್ತದೆ."**

ಅಂತೆಯೇ ಕಲಂ–116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ–4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಸಂಚಾರಿ ಪೊಲೀಸ್ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ : 30–06–2014 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ : 27–06–2014 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**P.R. 500**
**SC-10**

**ರಾಘವೇಂದ್ರ. ಹೆಚ್. ಔರಾದಕರ್, ಐ.ಪಿ.ಎಸ್.**
ಪೊಲೀಸ್ ಕಮೀಷನರ್, ಬೆಂಗಳೂರು ನಗರ.

## ಪೊಲೀಸ್ ಕಮೀಷನರ್‌ರವರ ಕಛೇರಿ, ನಂ. 1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ

## ಅಧಿಸೂಚನೆ

**ಸಂಖ್ಯೆ : ಸಿಬಿ/14/ಡಿಸಿಪಿ/ಸಂ.ಪೂ/2014, ಬೆಂಗಳೂರು, ದಿನಾಂಕ : 25–06–2014.**

ಬೆಂಗಳೂರು ನಗರ–ಸದಾಶಿವನಗರ ಸಂಚಾರ ಪೊಲೀಸ್ ಠಾಣೆಯ ವ್ಯಾಪ್ತಿಗೆ ಸೇರಿದ ವೈಯಾಲಿಕಾವಲ್, ಜಿ.ಡಿ. ಪಾರ್ಕ್ ಬಡಾವಣೆ, 16ನೇ ಅಡ್ಡ ರಸ್ತೆಯಲ್ಲಿ ವೈಯಾಲಿಕಾವಲ್ 3ನೇ ಮುಖ್ಯ ರಸ್ತೆ ಜಂಕ್ಷನ್‌ನಿಂದ ಬಿ.ವಿ.ಎಸ್. ಇಂಡೇನ್ ಗ್ಯಾಸ್ ಏಜೆನ್ಸಿವರೆಗೆ ಸ್ಟೆಲ್ಲಾ ಮೇರಿಸ್ ಶಾಲೆ, ತಿರುಮಲ ತಿರುಪತಿ ಮದುವೆ ಛತ್ರ, ದೇವಸ್ಥಾನ, ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆಯುವ ಚೌಡಯ್ಯ ಸ್ಮಾರಕ ಭವನ, ಬ್ರಾಹ್ಮಣರ ವೈಧಿಕ ಸಭಾ ಮತ್ತು ಬಿ.ಬಿ.ಎಂ.ಪಿ. ಕಛೇರಿಗಳು ಇದ್ದು, ಈ ಸ್ಥಳಗಳಿಗೆ ಬಂದು ಹೋಗುವ ಸಾರ್ವಜನಿಕರ ಸಂಖ್ಯೆ ಅಧಿಕವಾಗಿದ್ದು, ತಮ್ಮ ವಾಹನಗಳನ್ನು ರಸ್ತೆಯ ಎರಡೂ ಬದಿಗಳಲ್ಲಿ ನಿಲ್ಲಿಸುವುದರಿಂದ, ಈ ರಸ್ತೆಯಲ್ಲಿ ಆಗಾಗ್ಗೆ ಸಂಚಾರ ಸ್ಥಗಿತಗೊಂಡು ಸುಗಮ ಸಂಚಾರಕ್ಕೆ ತೀವ್ರ ಅಡಚಣೆಯುಂಟಾಗುತ್ತಿರುವ ಕಾರಣ ಸಾರ್ವಜನಿಕರ ಹಿತಾಸಕ್ತಿಗನುಗುಣವಾಗಿ ಹಾಗೂ ಸುಗಮ ಸಂಚಾರದ ವ್ಯವಸ್ಥೆಗಾಗಿ ಸದರಿ ರಸ್ತೆಯಲ್ಲಿ ರಸ್ತೆಯ ಉತ್ತರ ದಿಕ್ಕಿಗೆ ವಾಹನಗಳ ನಿಲುಗಡೆಗೆ ಅವಕಾಶ ಕಲ್ಪಿಸುವುದು ಹಾಗೂ ರಸ್ತೆಯ ದಕ್ಷಿಣ ದಿಕ್ಕಿಗೆ ವಾಹನಗಳ ನಿಲುಗಡೆಯನ್ನು ನಿಷೇಧಿಸುವುದು ಅತ್ಯವಶ್ಯಕವೆಂದು ಕಂಡು ಬಂದಿರುತ್ತದೆ.

ಆದ್ದರಿಂದ ಕಲಂ 115 ಐ.ಎಂ.ವಿ. ಕಾಯ್ದೆ 1988 ಹಾಗೂ ಕಲಂ–3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನ್ನ ಅಧಿಕಾರದ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ರಾಘವೇಂದ್ರ ಔರಾದ್‌ಕರ್, ಐ.ಪಿ.ಎಸ್. ಪೊಲೀಸ್ ಆಯುಕ್ತರು, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ನಿರ್ಬಂಧನೆಗಳನ್ನು ಆದೇಶಿಸಿರುತ್ತೇನೆ.

**"ವೈಯಾಲಿಕಾವಲ್, ಜಿ.ಡಿ. ಪಾರ್ಕ್, ಬಡಾವಣೆ, 16ನೇ ಅಡ್ಡ ರಸ್ತೆಯಲ್ಲಿ ವೈಯಾಲಿಕಾವಲ್ 3ನೇ ಮುಖ್ಯ ರಸ್ತೆ, ಜಂಕ್ಷನ್‌ನಿಂದ ಬಿ.ವಿ.ಎಸ್. ಇಂಡೇನ್ ಗ್ಯಾಸ್ ಏಜೆನ್ಸಿವರೆಗೆ ರಸ್ತೆಯ ಉತ್ತರ ದಿಕ್ಕಿಗೆ ವಾಹನ ನಿಲುಗಡೆಗೆ ಅವಕಾಶ ಕಲ್ಪಿಸಿ, ರಸ್ತೆಯ ದಕ್ಷಿಣ ದಿಕ್ಕಿಗೆ ವಾಹನಗಳ ನಿಲುಗಡೆಯನ್ನು ನಿಷೇಧಿಸಲಾಗಿದೆ."**

ಅಂತೆಯೇ ಕಲಂ–116 ಐ.ಎಂ.ವಿ. ಕಾಯ್ದೆ 1988 ಹಾಗೂ ಕಲಂ–4 ಕೆ.ಟಿ.ಸಿ. ಆಕ್ಟ್ 1960ರಲ್ಲಿ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸಹ ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ವ್ಯವಸ್ಥೆಯನ್ನು ದಿನಾಂಕ : 30–06–2014 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ : 25–06–2014 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**P.R. 501** **ರಾಘವೇಂದ್ರ. ಹೆಚ್. ಔರಾದಕರ್, ಐ.ಪಿ.ಎಸ್.**

**SC-10** ಪೊಲೀಸ್ ಕಮೀಷನರ್, ಬೆಂಗಳೂರು ನಗರ.

## ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರ ಕಛೇರಿ, ನಂ. 17, ಜಯನಿವಾಸ, ಶಂಕರಮಠ ರಸ್ತೆ, ಬಸವನಗುಡಿ, ಬೆಂಗಳೂರು

### ಅಧಿಸೂಚನೆ

**ಸಂಖ್ಯೆ : ಸಿಬ್ಬಂದಿ–2/ಹೈಕಪ್ರಮೀ/34/2013–14, ಬೆಂಗಳೂರು, ದಿನಾಂಕ : 30–05–2014.**

**ವಿಷಯ :** ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದ್ರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ 2013ರಡಿಯಲ್ಲಿ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆಯಲ್ಲಿ ವಿವಿಧ ವೃಂದದ ಹುದ್ದೆಗಳಲ್ಲಿ ಸ್ಥಳೀಯ ವೃಂದವನ್ನು ರಚಿಸುವ ಕುರಿತು.

**ಉಲ್ಲೇಖ :** ಸರ್ಕಾರದ ಪತ್ರ ಸಂಖ್ಯೆ : ಸಇ/47/ಎಲೆಸೇ/2014, ದಿನಾಂಕ : 27–05–2014.

ಭಾರತೀಯ ಸಂವಿಧಾನದ ಅನುಚ್ಛೇದ 371(ಜೆ)ಯ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಹೊರಡಿಸಿರುವ ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ, 2013ರ ಕಂಡಿಕೆ 13ರನ್ವಯ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆಗೆ ಸಂಬಂಧಿಸಿದಂತೆ, ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು, ಬೆಂಗಳೂರು, ಇವರ ಕಛೇರಿಯನ್ನು ರಾಜ್ಯಮಟ್ಟದ ಕಛೇರಿಯೆಂದು ಗುರುತಿಸಲಾಗಿದ್ದು, ಸದರಿ ಕಛೇರಿಯ ಸೇವೆಯಲ್ಲಿನ ಹುದ್ದೆಗಳಲ್ಲಿ ವೃಂದವಾರು ಹೈದರಾಬಾದ್–ಕರ್ನಾಟಕ ಪ್ರದೇಶ ವ್ಯಾಪ್ತಿಯ ಸ್ಥಳೀಯ ವ್ಯಕ್ತಿಗಳಿಗೆ ಲಭ್ಯವಿರುವ ಶೇಕಡ 8ರಷ್ಟು ಹುದ್ದೆಗಳನ್ನು ಮೀಸಲಿರಿಸಿ, ಅನುಸೂಚಿ ಭಾಗ–1ರಲ್ಲಿರುವಂತೆ ರಾಜ್ಯ ಮಟ್ಟದ ಸ್ಥಳೀಯ ವೃಂದ ಈ ಮೂಲಕ ಅಧಿಸೂಚಿಸಲಾಗಿದೆ.

ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ, 2013ರ ಕಂಡಿಕೆ 3 ರನ್ವಯ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆಗೆ ಸಂಬಂಧಿಸಿದಂತೆ, ಹೈದರಾಬಾದ್–ಕರ್ನಾಟಕ ಪ್ರದೇಶ ವ್ಯಾಪ್ತಿಯ ಕಂದಾಯ ಜಿಲ್ಲೆಗಳಾದ ಬೀದರ್, ಗುಲ್ಬರ್ಗಾ, ರಾಯಚೂರು, ಕೊಪ್ಪಳ, ಯಾದಗಿರಿ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿನ ಹುದ್ದೆಗಳಲ್ಲಿ ವೃಂದವಾರು ಹೈದರಾಬಾದ್–ಕರ್ನಾಟಕ ಪ್ರದೇಶ ವ್ಯಾಪ್ತಿಯ ಸ್ಥಳೀಯ ವ್ಯಕ್ತಿಗಳಿಗೆ ಲಭ್ಯವಿರುವ ಗ್ರೂಪ್ 'ಎ' ವೃಂದದ ಶೇಕಡಾ 75 ರಷ್ಟು ಗ್ರೂಪ್ 'ಬಿ' ವೃಂದದ ಶೇಕಡ 75 ರಷ್ಟು, ಗ್ರೂಪ್ 'ಸಿ' ವೃಂದದ ಶೇಕಡ 80 ರಷ್ಟು ಹಾಗೂ ಗ್ರೂಪ್ 'ಡಿ' ವೃಂದದ ಶೇಕಡ 85 ರಷ್ಟು ಹುದ್ದೆಗಳನ್ನು ಮೀಸಲಿರಿಸಿ "ಪ್ರಾದೇಶಿಕ ಸ್ಥಳೀಯ ವೃಂದ" ಅನುಸೂಚಿ ಭಾಗ–2 ರಲ್ಲಿರುವಂತೆ ಈ ಮೂಲಕ ಅಧಿಸೂಚಿಸಲಾಗಿದೆ.

ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) (ಸ್ಥಳೀಯ ವೃಂದಗಳ ರಚನೆ, ಹಂಚಿಕೆ ಮತ್ತು ವ್ಯಕ್ತಿಗಳ ವರ್ಗಾವಣೆ) ನಿಯಮಗಳು, 2013 ರ ನಿಯಮ 3(2)(ಸಿ) ರಂತೆ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆಯು ರಾಜ್ಯ ಮಟ್ಟದ ಸ್ಥಳೀಯ ವೃಂದ ಮತ್ತು ಪ್ರಾದೇಶಿಕ ಸ್ಥಳೀಯ ವೃಂದವನ್ನು ವಿಲೀನಗೊಳಿಸಿ, "ರಾಜ್ಯ ವ್ಯಾಪ್ತಿ ಸ್ಥಳೀಯ ವೃಂದ" ವನ್ನು ರಚಿಸಿ, ಅನುಸೂಚಿ ಭಾಗ–3ರಲ್ಲಿರುವಂತೆ ಈ ಮೂಲಕ ಅಧಿಸೂಚಿಸಲಾಗಿದೆ.

**ಅನುಸೂಚಿ ಭಾಗ–1**

**"ರಾಜ್ಯಮಟ್ಟದ ಸ್ಥಳೀಯ ವೃಂದ"**

| ಕ್ರ. ಸಂ. | ಹುದ್ದೆ | ವೇತನ ಶ್ರೇಣಿ (ರೂ. ಗಳಲ್ಲಿ) | ವೃಂದ ಬಲ | ಮುಂಬಡ್ತಿ | ನೇರ ನೇಮಕಾತಿ | ಹೈದರಾಬಾದ್–ಕರ್ನಾಟಕ ಪ್ರದೇಶದವರಿಗಾಗಿ ಗುರುತಿಸಲಾದ ಶೇಕಡ 8 ರಷ್ಟು ಹುದ್ದೆಗಳು | | |
|---|---|---|---|---|---|---|---|---|
| | | | | | | ಮುಂಬಡ್ತಿ | ನೇರ ನೇಮಕಾತಿ | ಒಟ್ಟು |
| 1 | 2 | 3 | 4 | 5 | 6 | 7 | 8 | 9 |
| ಗ್ರೂಪ್ 'ಎ' | | | | | | | | |
| 1. | ನಿರ್ದೇಶಕರು | | 01 | By deputation | | ಅನ್ವಯಿಸುವುದಿಲ್ಲ | | |
| 2. | ಜಂಟಿ ನಿರ್ದೇಶಕರು | 40050–56550 | 04 | (ಶೇ. 100 ಮುಂಬಡ್ತಿ | | ಅನ್ವಯಿಸುವುದಿಲ್ಲ | | |
| | | | | 04 | – | | | |
| 3. | ಉಪ ನಿರ್ದೇಶಕರು | 36300–53850 | 03 | (ಶೇ. 100 ಮುಂಬಡ್ತಿ) | | 01 | – | 01 |
| | | | | 03 | – | | | |

| 1 | 2 | 3 | 4 | 5 | 6 | 7 | 8 | 9 |
|---|---|---|---|---|---|---|---|---|
| ಗ್ರೂಪ್ 'ಬಿ' | | | | | | | | |
| 4. | ಸಹಾಯಕ ನಿರ್ದೇಶಕರು | 22800–43200 | 09 | (ಶೇ. 66 2/3 ಮುಂಬಡ್ತಿ ಶೇ. 33 1/3 ನೇರ ನೇಮಕಾತಿ) | | 01 | – | 01 |
| | | | | 06 | 03 | | | |
| ಗ್ರೂಪ್ 'ಸಿ' | | | | | | | | |
| 5. | ಹಿರಿಯ ಲೆಕ್ಕಪರಿಶೋಧಕರು | 17650–32000 | 16 | (ಶೇ. 100 ಮುಂಬಡ್ತಿ) | | 02 | – | 02 |
| | | | | 16 | – | | | |
| 6. | ಲೆಕ್ಕಪರಿಶೋಧಕರು | 14550–26700 | 23 | (ಶೇ. 100 ನೇರ ನೇಮಕಾತಿ) | | – | 02 | 02 |
| | | | | – | 23 | | | |
| 7. | ಪ್ರಥಮ ದರ್ಜೆ ಸಹಾಯಕರು | 14550–26700 | 35 | (ಶೇ. 50 ಮುಂಬಡ್ತಿ ಶೇ. 50 ನೇರ ನೇಮಕಾತಿ) | | 02 | 01 | 03 |
| | | | | 18 | 17 | | | |
| 8. | ಶೀಘ್ರಲಿಪಿಗಾರರು | 14550–26700 | 05 | (ಶೇ. 50 ಮುಂಬಡ್ತಿ ಶೇ. 50 ನೇರ ನೇಮಕಾತಿ) | | 01 | – | 01 |
| | | | | 03 | 02 | | | |
| 9. | ದ್ವಿತೀಯ ದರ್ಜೆ ಸಹಾಯಕರು | 11600–21000 | 07 | (ಶೇ. 33 ಮುಂಬಡ್ತಿ ಶೇ. 67 ನೇರ ನೇಮಕಾತಿ) | | – | 01 | 01 |
| | | | | 02 | 05 | | | |
| 10. | ಬೆರಳಚ್ಚುಗಾರರು | 11600–21000 | 07 | ಶೇ. 100 ನೇರ ನೇಮಕಾತಿ) | | – | 01 | 01 |
| | | | | – | 07 | | | |
| 11. | ವಾಹನ ಚಾಲಕರು | 11600–21000 | 08 | ಮುಂಬಡ್ತಿ/ನೇರ ನೇಮಕಾತಿ | | – | 01 | 01 |
| | | | | – | 08 | | | |
| ಗ್ರೂಪ್ 'ಡಿ' | | | | | | | | |
| 12. | ದಫೇದಾರರು | 11000–19000 | 01 | (ಶೇ. 100 ಮುಂಬಡ್ತಿ) | | – | – | – |
| | | | | 01 | – | | | |
| 13. | 'ಡಿ' ದರ್ಜೆ ನೌಕರರು | 9600–14550 | 24 | (ಶೇ. 100 ನೇರ ನೇಮಕಾತಿ) | | – | 02 | 02 |
| | | | | – | 24 | | | |

**ಅನುಸೂಚಿ ಭಾಗ–2**

**"ಪ್ರಾದೇಶಿಕ ಸ್ಥಳೀಯ ವೃಂದಗಳು"**

| ಕ್ರ. ಸಂ. | ಹುದ್ದೆ | | ವೇತನ ಶ್ರೇಣಿ (ರೂ. ಗಳಲ್ಲಿ) | ವೃಂದ ಬಲ | ಮುಂಬಡ್ತಿ | ನೇರ ನೇಮಕಾತಿ | ಹೈದರಾಬಾದ್–ಕರ್ನಾಟಕ ಪ್ರದೇಶದವರಿಗಾಗಿ ಗುರುತಿಸಲಾದ ಸಮೂಹ 'ಎ' ಮತ್ತು 'ಬಿ' ಹುದ್ದೆಗಳಿಗೆ 75% ಸಮೂಹ 'ಸಿ' ಹುದ್ದೆಗಳಿಗೆ 80% ಸಮೂಹ 'ಡಿ' ಹುದ್ದೆಗಳಿಗೆ 85% | | |
|---|---|---|---|---|---|---|---|---|---|
| | | | | | | | ಮುಂಬಡ್ತಿ | ನೇರ ನೇಮಕಾತಿ | ಒಟ್ಟು |
| 1 | 2 | | 3 | 4 | 5 | 6 | 7 | 8 | 9 |
| ಗ್ರೂಪ್ 'ಎ' | | | | | | | | | |
| 1. | ಉಪ ನಿರ್ದೇಶಕರು | | 36300–53850 | 06 | (ಶೇ. 100 ಮುಂಬಡ್ತಿ) | | 05 | – | 05 |
| | ಗುಲ್ಬರ್ಗಾ ಜಿಲ್ಲೆ | 01 | | | 06 | – | | | |
| | ಯಾದಗಿರಿ ಜಿಲ್ಲೆ | 01 | | | | | | | |
| | ಬೀದರ್ ಜಿಲ್ಲೆ | 01 | | | | | | | |
| | ರಾಯಚೂರು ಜಿಲ್ಲೆ | 01 | | | | | | | |
| | ಕೊಪ್ಪಳ ಜಿಲ್ಲೆ | 01 | | | | | | | |
| | ಬಳ್ಳಾರಿ ಜಿಲ್ಲೆ | 01 | | | | | | | |

| 1 | 2 | | 3 | 4 | 5 | 6 | 7 | 8 | 9 |
|---|---|---|---|---|---|---|---|---|---|
| **ಗ್ರೂಪ್ 'ಬಿ'** | | | | | | | | | |
| 2. | **ಸಹಾಯಕ ನಿರ್ದೇಶಕರು** | | 22800–43200 | 09 | (ಶೇ. 66 2/3 ಮುಂಬಡ್ತಿ ಶೇ. 33 1/3 ನೇರ ನೇಮಕಾತಿ) | | 05 | 02 | 07 |
| | ಗುಲ್ಬರ್ಗಾ ಜಿಲ್ಲೆ | 02 | | | 06 | 03 | | | |
| | ಯಾದಗಿರಿ ಜಿಲ್ಲೆ | 01 | | | | | | | |
| | ಬೀದರ್ ಜಿಲ್ಲೆ | 01 | | | | | | | |
| | ರಾಯಚೂರು ಜಿಲ್ಲೆ | 02 | | | | | | | |
| | ಕೊಪ್ಪಳ ಜಿಲ್ಲೆ | 01 | | | | | | | |
| | ಬಳ್ಳಾರಿ ಜಿಲ್ಲೆ | 02 | | | | | | | |
| **ಗ್ರೂಪ್ 'ಸಿ'** | | | | | | | | | |
| 3. | **ಹಿರಿಯ ಲೆಕ್ಕಪರಿಶೋಧಕರು** | | 17650–32000 | 46 | ಶೇ. 100 ಮುಂಬಡ್ತಿ | | 37 | – | 37 |
| | ಗುಲ್ಬರ್ಗಾ ಜಿಲ್ಲೆ | 10 | | | 46 | – | | | |
| | ಯಾದಗಿರಿ ಜಿಲ್ಲೆ | 05 | | | | | | | |
| | ಬೀದರ್ ಜಿಲ್ಲೆ | 07 | | | | | | | |
| | ರಾಯಚೂರು ಜಿಲ್ಲೆ | 08 | | | | | | | |
| | ಕೊಪ್ಪಳ ಜಿಲ್ಲೆ | 06 | | | | | | | |
| | ಬಳ್ಳಾರಿ ಜಿಲ್ಲೆ | 10 | | | | | | | |
| 4. | **ಲೆಕ್ಕಪರಿಶೋಧಕರು** | | 14550–26700 | 60 | ಶೇ. 100 ನೇರ ನೇಮಕಾತಿ | | – | 48 | 48 |
| | ಗುಲ್ಬರ್ಗಾ ಜಿಲ್ಲೆ | 14 | | | – | 60 | | | |
| | ಯಾದಗಿರಿ ಜಿಲ್ಲೆ | 04 | | | | | | | |
| | ಬೀದರ್ ಜಿಲ್ಲೆ | 09 | | | | | | | |
| | ರಾಯಚೂರು ಜಿಲ್ಲೆ | 10 | | | | | | | |
| | ಕೊಪ್ಪಳ ಜಿಲ್ಲೆ | 08 | | | | | | | |
| | ಬಳ್ಳಾರಿ ಜಿಲ್ಲೆ | 15 | | | | | | | |
| 5. | **ಪ್ರಥಮ ದರ್ಜೆ ಸಹಾಯಕರು** | | 14550–26700 | 15 | ಶೇ. 50 ಮುಂಬಡ್ತಿ ಶೇ. 50 ನೇರ ನೇಮಕಾತಿ | | 06 | 06 | 12 |
| | ಗುಲ್ಬರ್ಗಾ ಜಿಲ್ಲೆ | 03 | | | 08 | 07 | | | |
| | ಯಾದಗಿರಿ ಜಿಲ್ಲೆ | 02 | | | | | | | |
| | ಬೀದರ್ ಜಿಲ್ಲೆ | 02 | | | | | | | |
| | ರಾಯಚೂರು ಜಿಲ್ಲೆ | 03 | | | | | | | |
| | ಕೊಪ್ಪಳ ಜಿಲ್ಲೆ | 02 | | | | | | | |
| | ಬಳ್ಳಾರಿ ಜಿಲ್ಲೆ | 03 | | | | | | | |
| 6. | **ಶೀಘ್ರಲಿಪಿಗಾರರು** | | 14550–26700 | 01 | ಶೇ. 100 ನೇರ ನೇಮಕಾತಿ | | – | 01 | 01 |
| | ಗುಲ್ಬರ್ಗಾ | 01 | | | – | 01 | | | |
| 7. | **ದ್ವಿತೀಯ ದರ್ಜೆ ಸಹಾಯಕರು** | | 11600–21000 | 13 | ಶೇ. 33 ಮುಂಬಡ್ತಿ ಶೇ. 67 ನೇರ ನೇಮಕಾತಿ | | 03 | 08 | 11 |
| | ಗುಲ್ಬರ್ಗಾ ಜಿಲ್ಲೆ | 03 | | | 04 | 09 | | | |
| | ಯಾದಗಿರಿ ಜಿಲ್ಲೆ | 01 | | | | | | | |

| 1 | 2 | | 3 | 4 | 5 | 6 | 7 | 8 | 9 |
|---|---|---|---|---|---|---|---|---|---|
| | ಬೀದರ್ ಜಿಲ್ಲೆ | 02 | | | | | | | |
| | ರಾಯಚೂರು ಜಿಲ್ಲೆ | 03 | | | | | | | |
| | ಕೊಪ್ಪಳ ಜಿಲ್ಲೆ | 02 | | | | | | | |
| | ಬಳ್ಳಾರಿ ಜಿಲ್ಲೆ | 02 | | | | | | | |
| 8. | **ಬೆರಳಚ್ಚುಗಾರರು** | | 11600–21000 | 15 | ಶೇ. 100 ನೇರ ನೇಮಕಾತಿ | | – | 12 | 12 |
| | ಗುಲ್ಬರ್ಗಾ ಜಿಲ್ಲೆ | 04 | | | – | 15 | | | |
| | ಯಾದಗಿರಿ ಜಿಲ್ಲೆ | 01 | | | | | | | |
| | ಬೀದರ್ ಜಿಲ್ಲೆ | 02 | | | | | | | |
| | ರಾಯಚೂರು ಜಿಲ್ಲೆ | 03 | | | | | | | |
| | ಕೊಪ್ಪಳ ಜಿಲ್ಲೆ | 02 | | | | | | | |
| | ಬಳ್ಳಾರಿ ಜಿಲ್ಲೆ | 03 | | | | | | | |
| 9. | **ವಾಹನ ಚಾಲಕರು** | | 11600–21000 | 01 | ಶೇ. 100 ನೇರ ನೇಮಕಾತಿ | | – | 01 | 01 |
| | ಬೀದರ್ ಜಿಲ್ಲೆ | 01 | | | – | 01 | | | |
| 10. | **ದಫೇದಾರರು** | | 11000–19000 | 01 | ಶೇ. 100 ಮುಂಬಡ್ತಿ | | 01 | – | 01 |
| | ಗುಲ್ಬರ್ಗಾ ಜಿಲ್ಲೆ | 01 | | | 01 | – | | | |
| 11. | 'ಡಿ' ದರ್ಜೆ ನೌಕರರು | | 9600–14550 | | ಶೇ. 100 ನೇರ ನೇಮಕಾತಿ | | | | |
| | ಗುಲ್ಬರ್ಗಾ ಜಿಲ್ಲೆ | 09 | | 09 | – | 09 | – | 08 | 08 |
| | ಯಾದಗಿರಿ ಜಿಲ್ಲೆ | 04 | | 04 | – | 04 | – | 03 | 03 |
| | ಬೀದರ್ ಜಿಲ್ಲೆ | 07 | | 07 | – | 07 | – | 06 | 06 |
| | ರಾಯಚೂರು ಜಿಲ್ಲೆ | 06 | | 06 | – | 06 | – | 05 | 05 |
| | ಕೊಪ್ಪಳ ಜಿಲ್ಲೆ | 04 | | 04 | – | 04 | – | 03 | 03 |
| | ಬಳ್ಳಾರಿ ಜಿಲ್ಲೆ | 07 | | 07 | – | 07 | – | 06 | 06 |

**ಅನುಸೂಚಿ ಭಾಗ–3**

**"ರಾಜ್ಯ ವ್ಯಾಪ್ತಿ ಸ್ಥಳೀಯ ವೃಂದ"**

| ಕ್ರ. ಸಂ. | ಹುದ್ದೆ | ವೇತನ ಶ್ರೇಣಿ (ರೂ. ಗಳಲ್ಲಿ) | ರಾಜ್ಯ ಮಟ್ಟದ ಸ್ಥಳೀಯ ವೃಂದ | | | ಪ್ರಾದೇಶಿಕ ಸ್ಥಳೀಯ ವೃಂದ | | | ರಾಜ್ಯ ವ್ಯಾಪ್ತಿ ಸ್ಥಳೀಯ ವೃಂದ | | |
|---|---|---|---|---|---|---|---|---|---|---|---|
| | | | ಮುಂಬಡ್ತಿ | ನೇರ ನೇಮಕಾತಿ | ಒಟ್ಟು | ಮುಂಬಡ್ತಿ | ನೇರ ನೇಮಕಾತಿ | ಒಟ್ಟು | ಮುಂಬಡ್ತಿ | ನೇರ ನೇಮಕಾತಿ | ಒಟ್ಟು |
| 1 | 2 | 3 | 4 | 5 | 6 | 7 | 8 | 9 | 10 | 11 | 12 |
| **ಗ್ರೂಪ್ 'ಎ'** | | | | | | | | | | | |
| 1. | ನಿರ್ದೇಶಕರು | – | ಅನ್ವಯಿಸುವುದಿಲ್ಲ | | | ಅನ್ವಯಿಸುವುದಿಲ್ಲ | | | ಅನ್ವಯಿಸುವುದಿಲ್ಲ | | |
| 2. | ಜಂಟಿ ನಿರ್ದೇಶಕರು | 40050–56550 | ಅನ್ವಯಿಸುವುದಿಲ್ಲ | | | ಅನ್ವಯಿಸುವುದಿಲ್ಲ | | | ಅನ್ವಯಿಸುವುದಿಲ್ಲ | | |
| 3. | ಉಪ ನಿರ್ದೇಶಕರು | 36300–53850 | 01 | – | 01 | 05 | – | 05 | 06 | – | 06 |
| **ಗ್ರೂಪ್ 'ಬಿ'** | | | | | | | | | | | |
| 4. | ಸಹಾಯಕ ನಿರ್ದೇಶಕರು | 22800–43200 | 01 | – | 01 | 05 | 02 | 07 | 06 | 02 | 08 |

